# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಎಲ್ಲಾ ಕಲೆಗಳೂ ಸಾಮಾಜಿಕ ಪ್ರಯೋಜಕಗಳಾಗಿವೆಯೆಂಬದನ್ನು ಗಮನಿಸಬೇಕು. ಕಲೆಗಳಿಂದಾಗಿ ಕಲಾಕಾರರಿಗೂ ಕೀರ್ತಿಯುಂಟಾಗುತ್ತದೆ. ಪ್ರಜೆಗಳಿಂದ ಆದರಣೆ ಪಡೆದ ಕಲೆಗಳಿಗೆ ರಾಜನ ಆದರಣೆಯೂ ಧನವೂ ಸನ್ಮಾನ ಗೌರವಗಳೂ ದೊರೆಯುತ್ತವೆ. ಕಲೆಗಳ ಮೂಲಕವಾಗಿ ಜನತೆಯಲ್ಲಿ ಸಂಸ್ಕೃತಿಯು ವಿಕಸನವೂ ಆಗುತ್ತದೆ. ದೊಡ್ಡ ದೊಡ್ಡ ಕಲೆಗಾರರು ತಮ್ಮ ದೇಶಕ್ಕೆ ಅಂತಾರಾಷ್ಟ್ರೀಯ ಖ್ಯಾತಿಯನ್ನು ತಂದುಕೊಡುತ್ತಾರೆ. ಇದಕ್ಕೆ ಉದಾಹರಣೆಯಾಗಿ ಕೀರ್ತಿಶೇಷರಾದ ರವೀಂದ್ರನಾಥ ಟಾಗೋರರನ್ನೂ, ಈಗಿನ ಸತ್ಯಜಿತ್‌ರಾಯ್‌ರನ್ನೂ ಹೇಳಬಹುದು. ಕೇವಲ ತನಗಾಗಿಯೇ ಕಲಾರಾಧನೆ ಮಾಡುವವನಿಂದ ಈ ಬಗೆಯ ಪ್ರಯೋಜನಗಳು ಸಿಗಲಾರವು. ಈ ವಿಷಯವನ್ನು ಈ ಸಂಚಿಕೆಯ 'ಅತೃಪ್ತಿ' ಎಂಬ ಬೇತಾಳ ಕಥೆಯಲ್ಲಿ ಕಾಣಬಹುದು.

ಸಂಪುಟ : ೫೮ ಜೂನ್ '೭೭ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






# ೧೮೫. ಲಿಂಗಪರ್ವತಾಲಯ

ಲಾವೋಸಿನಲ್ಲಿ ವಾಲ್‌ಪೂವಿನ ಬಳಿಯಲ್ಲಿ ಈ ಲಿಂಗಪರ್ವತಾಲಯವು ಇದ್ದಿತು. ಅದನ್ನು ಬ್ರಾಹ್ಮಣರು ಬಿಟ್ಟುಹೋದ ಮೇಲೆ ಬೌದ್ಧರು ಉಪಯೋಗಿಸಿಕೊಂಡರು. ಮಿಕಾಂಗ್ ನದಿಯ ಹತ್ತಿರ ಒಂದು ಗುಡ್ಡದ ಬಳಿಯಲ್ಲಿ ಬ್ರಾಹ್ಮಣರಿಗೆ ಪವಿತ್ರವಾಗಿದ್ದ ಒಂದು ಜಲಕುಂಡವೂ ಸಹ ಬೌದ್ಧರ ಶೌಚ ಸ್ನಾನದಂತಹ ಕಾರ್ಯಗಳಿಗೆ ಉಪಯೋಗವಾಯಿತು.





# ಅತೃಪ್ತಿ

ಕೆಡುಗಲಿಯಾದ ತ್ರಿವಿಕ್ರಮನು ತನ್ನ ಎಡೆಬಿಡದ ಸಂಗಾತಿಯಾದ ಹಟದೊಂದಿಗೆ ಮತ್ತೆ ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ಎಂತಹ ಉನ್ನತವಾದ ಆದರ್ಶಕ್ಕಾಗಿ ಹೀಗೆ ಹೋರಾಡುವಿಯೋ ತಿಳಿಯದು. ಉನ್ನತವಾದ ಆದರ್ಶಗಳು ಒಂದೊಂದು ಸಾರಿ ತುಂಬಾ ನಷ್ಟವನ್ನುಂಟು ಮಾಡಿಬಿಡುತ್ತವೆ. ಇದಕ್ಕೆ ನಿದರ್ಶನವಾಗಿ ನಿನಗೆ ಸುಶರ್ಮನೆಂಬ ಶಿಲ್ಪಿ ಯುವಕನ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆಯುವಿಯಂತೆ" ಎಂದು ಕಥೆಯನ್ನು ಹೇಳತೊಡಗಿತು :

ಹಿಂದೆ ಒಂದು ಕಾಲದಲ್ಲಿ ಜಲಂಧರವೆಂಬುದೊಂದು ರಾಜ್ಯವಿದ್ದಿತು. ಅಲ್ಲಿ ಒಂದು ಮನೆಯಲ್ಲಿ ಸುಶರ್ಮನೆಂಬವನು ಹುಟ್ಟಿದ್ದ. ಅವನಿಗೊಂದು ವಿಚಿತ್ರವಾದ ಗುಣವು ಅಂಟಿಕೊಂಡಿತ್ತು. ಅದೇ

ಬೇತಾಳಕಥೆಗಳು

ನೆಂದರೆ, ಶಿಲ್ಪಿಗಳು ಶಿಲ್ಪಗಳನ್ನು ಕೆತ್ತುವಾಗ ಅವನು ಅವರ ಕೆಲಸವನ್ನು ನೋಡುತ್ತಾ ನಿಲ್ಲುವನು. ಅದಕ್ಕಾಗಿಯೇ ಅವನು ಶಿಲ್ಪಿಗಳು ಕೆಲಸಮಾಡುವ ಸ್ಥಳಕ್ಕೆ ಬಂದು, ಇಡೀ ದಿನ ಅವರು ಮಾಡುವ ಕೆಲಸ ನೋಡುತ್ತಾ, ಹಸಿವೆ ನೀರಡಿಕೆಗಳನ್ನು ಕೂಡಾ ಮರೆತು ನಿಲ್ಲುವನು.

ಶಿಲ್ಪಿಗಳು ಅವನನ್ನು ದಿನಾ ನೋಡುತ್ತಿದ್ದು, ಕಡೆಗೊಂದು ದಿನ ಅವನೊಡನೆ, "ಏನಯ್ಯ, ನಿನಗೆ ಶಿಲ್ಪಕಲೆಯ ಮೇಲೆ ಅಷ್ಟೊಂದು ಪ್ರೀತಿಯಿದ್ದರೆ, ಮಹಾರಾಜರು ಏರ್ಪಡಿಸಿರುವ ಶಿಲ್ಪವಿದ್ಯಾಲಯದಲ್ಲಿ ಸೇರಿ ಈ ಕೆಲಸ ಕಲಿತುಕೊಳ್ಳಬಾರದೇ? ನಿನಗೆ ತುಂಬಾ ಸುಲಭ" ಎಂದರು.

ಅದೇ ಒಳ್ಳೆಯದೆನಿಸಿ ಸುಶರ್ಮನು ಶಿಲ್ಪ ವಿದ್ಯಾಲಯಕ್ಕೆ ಹೋಗಿ, ಅಲ್ಲಿಯ ಕುಲಪತಿಯೊಂದಿಗೆ ತನ್ನ ಅಭಿಲಾಷೆಯನ್ನು ಹೇಳಿಕೊಂಡನು. ಅದನ್ನು ಕೇಳಿ ಶಿಲ್ಪ ಕುಲಪತಿ, "ಅಪ್ಪ, ನೀನು ಶಿಲ್ಪವ್ಯಕ್ತಿಯ ಮನೆತನದಲ್ಲಿ ಜನಿಸಿದವನಲ್ಲವಾದುದರಿಂದ, ನಿನ್ನನ್ನು ಈ ಶಿಲ್ಪವಿದ್ಯಾಲಯದಲ್ಲಿ ಸೇರಿಸಲು ಸಾಧ್ಯವಿಲ್ಲ. ಇಲ್ಲಿಯ ನಿಯಮವೇ ಹಾಗಿದೆ; ಅದನ್ನು ಮೀರುವಂತಿಲ್ಲ" ಎಂದು ಹೇಳಿಬಿಟ್ಟನು.

ಸುಶರ್ಮನು ನಿರಾಶೆಯಿಂದ ಮಹಾರಾಜನ ಬಳಿಗೆ ಹೋಗಿ, ಶಿಲ್ಪ ಕುಲಪತಿ ಹೇಳಿದುದನ್ನು ಹೇಳಿ ಫಿರ್ಯಾದು ಮಾಡಿದನು.

ರಾಜನು ಅವನ ಅಭಿಲಾಷೆಯನ್ನು ತಿಳಿದುಕೊಂಡು, "ಕುಲಪತಿ ಹಾಗೆ ಹೇಳಿದುದರಲ್ಲಿ ತಪ್ಪೇನಿಲ್ಲ. ಅಂತಹದೊಂದು ಹಳೆಯ ನಿಯಮವಿದೆ. ಈಗ ಆ ನಿಯಮವನ್ನು ಪಾಲಿಸಬೇಕೆಂಬ ಖಂಡಿತವೇನಿಲ್ಲ. ನೀನು ನಿನ್ನ ವಿದ್ಯೆಯನ್ನು ನಮ್ಮ ದೇಶದ ಪ್ರಜೆಗಳಿಗೇ ಉಪಯೋಗವಾಗುವಂತೆ ನೋಡಬೇಕು" ಎಂದನು.

ಸುಶರ್ಮನು ಹಾಗೆಯೇ ಮಾತುಕೊಟ್ಟನು. ರಾಜನ ಅಪ್ಪಣೆಯಿಂದ ಅವನಿಗೆ ಶಿಲ್ಪವಿದ್ಯಾಲಯದಲ್ಲಿ ಪ್ರವೇಶ ಸಿಕ್ಕಿತು. ಅಭಿರುಚಿಯುಳ್ಳವನಾದುದರಿಂದ ವಿಶೇಷ ಆಸಕ್ತಿಯನ್ನು ವಹಿಸಿ ಅಲ್ಲಿ ಕಲಿಯು



ವಂತಹುದನ್ನೆಲ್ಲಾ ಬಲುಬೇಗನೇ ಕಲಿತು ಮುಗಿಸಿದ. "ಇನ್ನು ನೀನು ಕಲಿಯುವಂತಹುದೇನೂ ಇಲ್ಲ. ಈ ವಿದ್ಯೆಯನ್ನೇ ಕೈಕೊಂಡು ಬದುಕಬಹುದು" ಎಂದು ಅಲ್ಲಿಯ ಕುಲಪತಿ ಸುಶರ್ಮನೊಂದಿಗೆ ಹೇಳಿ ಅಲ್ಲಿಂದ ಕಳುಹಿಸಿಬಿಟ್ಟನು.

ಸುಶರ್ಮನು ರಾಜನ ಬಳಿಗೆ ಹೋಗಿ, "ಮಹಾರಾಜರೆ, ನಿಮ್ಮ ದಯದಿಂದ ನಮ್ಮ ಶಿಲ್ಪ ವಿದ್ಯಾಲಯದಲ್ಲಿ ಕಲಿಯತಕ್ಕುದನ್ನೆಲ್ಲಾ ಕಲಿತಾಯಿತು. ಆದರೆ ನನಗೆ ತೃಪ್ತಿಯುಂಟಾಗಲಿಲ್ಲ. ಇನ್ನೂ ತಿಳಿದುಕೊಳ್ಳಬೇಕಾದ ಶಿಲ್ಪ ರಹಸ್ಯಗಳು ಎಷ್ಟೋ ಇವೆ ಎಂಬುದು ನನ್ನ ಅನುಮಾನ. ತಮ್ಮ ಅಪ್ಪಣೆಯಾದರೆ ನಾನು ಸ್ವಲ್ಪ ಕಾಲದವರೆಗೆ ದೇಶಾಟನೆ ಮಾಡಿ ನನಗೆ ತೃಪ್ತಿಯಾಗುವವರೆಗೆ ಶಿಲ್ಪ ರಹಸ್ಯಗಳನ್ನು ತಿಳಿದುಕೊಂಡುಬರುತ್ತೇನೆ." ಎಂದು ಕೇಳಿಕೊಂಡನು.

ಹಾಗೆಯೇ ಆಗಲೆಂದು ರಾಜನೂ ಅನುಮತಿ ಕೊಟ್ಟು ಕಳುಹಿಸಿದನು. ಸುಶರ್ಮನು ಅನೇಕ ದೇಶಗಳಿಗೆ ಹೋದನು. ಬೇರೆ ಬೇರೆ ಬಗೆಯ ಶಿಲ್ಪ ಸಂಪ್ರದಾಯಗಳನ್ನು ತಿಳಿದುಕೊಂಡನು. ಹಾಗೆಯೇ ಅವನು ತಿರುಗಾಡುತ್ತಾ ಒಂದುಕಾಡಿನೊಳಗೆ ನಡೆಯುತ್ತಿರಲು ಹಳೆಯ ಕಾಲದ ಶಿಥಿಲದೇವಾಲಯವನ್ನು ನೋಡಿದನು. ಆ ನಿರ್ಜನಾರಣ್ಯದ ನಡುವಿನ ದೇವಾಲಯದಲ್ಲಿ ಅವನೆಂದೂ ನೋಡದಂತಹ ಶಿಲ್ಪ ಸಂಪ್ರದಾಯವನ್ನು ನೋಡಿದನು. ಇದು ಯಾವ ರೀತಿಯ ಶಿಲ್ಪವೋ? ಇದರ ಮೂಲತತ್ತ್ವವೆಂತಹುದೋ?

ಸುಶರ್ಮನು ಅತ್ಯಂತ ಕುತೂಹಲದಿಂದ, ಹಸಿವೆ ನೀರಡಿಕೆಗಳನ್ನೂ, ಕ್ರೂರ ಮೃಗಗಳ ಭಯವನ್ನೂ ಮರೆತು, ಆ ದೇವಾಲಯದಲ್ಲಿಯೇ ತಂಗಿ ಅಲ್ಲಿರುವ ಶಿಲ್ಪಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡುವುದರಲ್ಲೇ ತಲ್ಲೀನನಾದನು. ಸಮಯಹೋದುದರ ಅರಿವೇ ಅವನಿಗಿರಲಿಲ್ಲ.

ಆಗ ಅಲ್ಲಿಗೊಬ್ಬ ವಿಚಿತ್ರ ವ್ಯಕ್ತಿ ಬಂದು, ಸುಶರ್ಮನನ್ನು ಮಾತಾಡಿಸಿದನು. ಸುಶರ್ಮನು ತಾನಾರೆಂಬುದನ್ನು ಅವನಿಗೆ ಹೇಳಿ, "ನನಗೆ ತುಂಬ ಪ್ರಾಚೀನ





ಶಿಲ್ಪ ಸಂಪ್ರದಾಯಗಳೂ ಗೊತ್ತಿವೆ. ಆದರೆ ಇಲ್ಲಿರುವ ಶಿಲ್ಪಗಳು ಯಾವ ಯುಗಕ್ಕೆ ಸೇರಿದವೋ ತಿಳಿಯಲಿಲ್ಲ." ಎಂದನು.

"ಇದು ಕೃತಯುಗದ ಶಿಲ್ಪಗಳು. ಈ ಶಿಲ್ಪಗಳ ರಹಸ್ಯ ತಿಳಿದವರು ಭೂಮಿಯಲ್ಲಿ ಒಬ್ಬರೂ ಸಹ ಈಗ ಇಲ್ಲ." ಎಂದ ಹೊಸಬ. ಅವನ ಮಾತು ಕೇಳಿ ಸುಶರ್ಮನು ತುಂಬ ಚಿಂತೆಯಿಂದ "ಅದು ಬಹಳ ಅನ್ಯಾಯ! ಇದನ್ನು ನಾನು ಸರಿಪಡಿಸಲೇ ಬೇಕು", ಎಂದು ಉದ್ಗರಿಸಿದನು.

"ನೀನು ನನ್ನೊಂದಿಗೆ ಬರುವುದಾದರೆ, ಈ ಬಗೆಯ ಶಿಲ್ಪಗಳನ್ನು ತಿಳಿದಿರುವ ಮಹಾಶಿಲ್ಪಿಯ ಪರಿಚಯ ಮಾಡಿಸುತ್ತೇನೆ. ನಿನಗೆ ಅದೃಷ್ಟವಿದ್ದರೆ ಅವನ ಅನುಗ್ರಹ ನಿನ್ನ ಮೇಲೆ ಆದರೂ ಆಗಬಹುದು" ಎಂದನು ಹೊಸಬ.

ಕೂಡಲೇ ಸುಶರ್ಮನ ಮುಖವು ವಿಕಸನವಾಯಿತು. ಅವನು ಆ ಹೊಸಬನೊಂದಿಗೆ ಹೊರಟು ಪಾತಾಳಕ್ಕೆ ಹೋದನು. ಅಲ್ಲಿ ದಾನವರ ಶಿಲ್ಪಿಯಾದ ಮಯನನ್ನು ನೋಡಿದನು. ಹೀಗೆ ಅವನನ್ನು ಪಾತಾಳಕ್ಕೆ ಕರೆದುಕೊಂಡು ಹೋದವನು ಕೂಡಾ ಒಬ್ಬ ದಾನವನೇ.

ಸುಶರ್ಮನ ಅಭಿಲಾಷೆಯನ್ನು ಗ್ರಹಿಸಿ ಮಯನು ಮೆಚ್ಚಿ ಸಂತೋಷದಿಂದ ಅವನಿಗೆ ತನ್ನ ಶಿಲ್ಪ ರಹಸ್ಯಗಳೆಲ್ಲವನ್ನೂ ತಿಳಿಸಿದನು. ಆಮೇಲೆ ಸುಶರ್ಮನು ಮಯನಿಗೆ ಕೃತಜ್ಞತೆ ಹೇಳಿಕೊಂಡು ಮತ್ತೆ ಭೂಮಿಯ ಮೇಲೆ ಬಂದನು.

ತಾನು ಕಲಿತ ಶಿಲ್ಪಗಳನ್ನು ಕುರಿತು ಆಲೋಚಿಸುತ್ತ ಅವನು ಒಂದು ಪರ್ವತ ಭೂಮಿಯಲ್ಲಿ ನಡೆಯುತ್ತಿರಲು, ಶಿಲ್ಪಕಾರ್ಯಕ್ಕೆ ಉಪಯೋಗವಾಗುವಂತಹ ಅನೇಕ ಶಿಲೆಗಳು ಅಲ್ಲಿರುವುದನ್ನು ನೋಡಿದನು. ಸುಶರ್ಮನು ಅಲ್ಲಿಯೇ ನಿಂತು ಮಯನ ಶಿಲ್ಪ ಕಲೆಯ ವಿಧಾನವನ್ನು ಆ ಶಿಲೆಗಳಲ್ಲಿ ಪ್ರಯೋಗಿಸುವ ಕೆಲಸಕ್ಕೆ ತೊಡಗಿದನು.

ಆ ಸಮಯದಲ್ಲಿ ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದ ದೇವಶಿಲ್ಪಿ ವಿಶ್ವಕರ್ಮನು ಅವನನ್ನು ನೋಡಿ ಆಶ್ಚರ್ಯದಿಂದ ನಿಂತನು. ಕೃತಯುಗ ಕಾಲದ ಶಿಲ್ಪವನ್ನು ಕೆತ್ತುತ್ತಿರುವ ಕಲಿಕಾಲದ ಮನುಷ್ಯನೊಬ್ಬನನ್ನು ನೋಡಿ ವಿಶ್ವಕರ್ಮನು ಅವನ ಬಳಿಗೆ ಬಂದು, "ಯಾರಯ್ಯ ನೀನು ? ನಿರ್ಜನವಾದ ಈ ಪ್ರದೇಶದಲ್ಲಿ, ಯಾರಿಗೂ ಉಪಯೋಗ ಬೀಳದ ಈ ಗುಡ್ಡದಲ್ಲಿ ಇಂತಹ ಶಿಲ್ಪಗಳನ್ನು ಏತಕ್ಕಾಗಿ ಕೆತ್ತುತ್ತಿರುವಿ ? ಯಾರು ನಿನಗೆ ಈ ಕೆಲಸಕ್ಕೆ ಪ್ರೇರೇಪಿಸಿದವರು ? " ಎಂದು ಕೇಳಿದನು.

ಸುಶರ್ಮನು ತನ್ನ ಕಥೆಯನ್ನೆಲ್ಲಾ ಅವನಿಗೆ ಹೇಳಿ, "ಆದರೂ ನಾನಿನ್ನೂ ಪರಿಪೂರ್ಣ ಶಿಲ್ಪಿಯಾಗಲಿಲ್ಲ. ತಿಳಿದುಕೊಂಡಷ್ಟೂ ಇನ್ನೂ ತಿಳಿದುಕೊಳ್ಳಬೇಕಾದ್ದು ಇರುವಂತೆ ಕಾಣುತ್ತದೆ. ನನ್ನ ಜೀವನ ಕಾಲವನ್ನೆಲ್ಲಾ ಶಿಲ್ಪ ರಹಸ್ಯಗಳನ್ನು ತಿಳಿದುಕೊಳ್ಳುವುದರಲ್ಲೇ ಕಳೆಯ

ಬೇಕೆಂದಿದ್ದೇನೆ. ಮಹನೀಯರಂತೆ ಕಾಣುವ ತಾವು ಯಾರು ಸ್ವಾಮಿ ? " ಎಂದು ಕೇಳಿದನು.

"ನಾನು ವಿಶ್ವಕರ್ಮ. ದೇವಶಿಲ್ಪಿ" ಎಂದ ವಿಶ್ವಕರ್ಮ. ಕೂಡಲೇ ಸುಶರ್ಮನು ಅವನ ಮುಂದೆ ಸಾಷ್ಟಾಂಗ ಬಿದ್ದು. "ನನ್ನ ಪೂರ್ವಜನ್ಮದ ಪುಣ್ಯ ವಿಶೇಷದಿಂದಲೇ ತಮ್ಮ ದರ್ಶನವಾಗಿದೆ. ನಾನು ಕೃತಯುಗಕ್ಕೆ ಸೇರಿದ ದಾನವ ಶಿಲ್ಪಗಳನ್ನು ಕಲಿತದ್ದಾಯಿತು. ನೀವು ದೊಡ್ಡ ಮನಸ್ಸಿನಿಂದ ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ದೇವಶಿಲ್ಪ ರಹಸ್ಯಗಳನ್ನು ಕೂಡಾ ಕಲಿಸಿ ನನ್ನನ್ನು ಧನ್ಯನನ್ನಾಗಿ ಮಾಡಬೇಕು" ಎಂದು ಬೇಡಿದನು.

"ಎಲೋ ದುಷ್ಟಮನುಷ್ಯನೇ ! ಪಾಪಿಯೇ ! ನೀನು ಇದುವರೆಗೆ ಕಲಿತ ಶಿಲ್ಪ ರಹಸ್ಯಗಳೆಲ್ಲವೂ ಮರೆತುಹೋಗಲಿ !" ಎಂದು ಶಾಪಕೊಟ್ಟು ವಿಶ್ವಕರ್ಮನು ಅಂತರ್ಧಾನನಾದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ವಿಶ್ವಕರ್ಮನಿಗೆ ಸುಶರ್ಮನ ಮೇಲೆ ಅಷ್ಟೊಂದು ಕೋಪ ಏತಕ್ಕೆ ಬಂತು ? ಅವನು ದಾನವ ಶಿಲ್ಪ ರಹಸ್ಯಗಳನ್ನು ಕಲಿತವನೆಂಬ ಅಸೂಯೆಯೋ ? ದೇವ ಶಿಲ್ಪವನ್ನೂ ಕಲಿತುಬಿಟ್ಟರೆ ತನಗಿಂತ ಹೆಚ್ಚಿನವನಾಗುವನೆಂಬ ಹೊಟ್ಟೇಕಿಚ್ಚಿನಿಂದಲೋ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದಿದ್ದರೆ ನಿನ್ನ ತಲೆಯೊಡೆದು ಚೂರು ಚೂರಾಗುತ್ತದೆ ! ಜಾಗ್ರತೆ !" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದ: "ವಿಶ್ವಕರ್ಮನಿಗೆ ಸುಶರ್ಮನ ಮೇಲೆ ಸಿಟ್ಟುಬರಲಿಕ್ಕೆ ಬೇರೆ ಕಾರಣಗಳಿವೆ. ಮಹಾ ಮಹಾ ಗುಣಗಳುಳ್ಳವರು ಅಸೂಯೆಗೆ ಒಳಗಾಗುವುದಿಲ್ಲ. ಸುಶರ್ಮನು ಶಿಲ್ಪಿಯಾದರೂ ದಾರಿ ತಪ್ಪಿದ ಒಬ್ಬ ದುಷ್ಟ. ರಾಜನಿಗೆ ಮಾತುಕೊಟ್ಟು, ಆ ಮಾತನ್ನು ಮೀರಿದ ಪಾಪಿ. ಅವನು ಹೊಸ ಶಿಲ್ಪ ಸಾಂಪ್ರದಾಯಗಳನ್ನು ಕಲಿತು ಬಂದು, ತನ್ನ ದೇಶದ ಪ್ರಜೆಗಳಿಗೆ ಉಪಯೋಗ ಬೀಳುವಂತೆ ಮಾಡುವನೆಂಬ ಉದ್ದೇಶದಿಂದ ರಾಜನು ಅವನನ್ನು ದೇಶಾಟನೆಗೆ ಕಳುಹಿಸಿದ್ದು. ಸುಶರ್ಮನು ವಿಶ್ವಕರ್ಮನೊಂದಿಗೆ ಹೇಳಿದ ಮಾತುಗಳಿಂದ ಅವನು ಸಾಯುವವರೆಗೂ ರಹಸ್ಯ ತಿಳಿಯುವುದರಲ್ಲೇ ಇರುವನೆಂಬುದು ಸ್ಪಷ್ಟವಾಗುತ್ತದೆ. ಇದು ಹೀನವಾದೊಂದು ಸ್ವಾರ್ಥ. ಇಂಥವನ ಜ್ಞಾನದಿಂದ ಯಾರಿಗೂ ಉಪಯೋಗವಿಲ್ಲವೆಂಬುದು ಸ್ಪಷ್ಟವಾದ ಮೇಲೆಯೇ ವಿಶ್ವಕರ್ಮನು ಅವನನ್ನು ಶಪಿಸಿದನು. ಆ ಶಾಪವು ಅವನಿಗೆ ಬೇಕಾದುದೇ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ದ್ವಾರದಾಖಲೆ

**ಯಾ**ರ ತಂಟೆಗೂ ಹೋಗದೆ, ಇದ್ದ ಸ್ವಲ್ಪ ಆಸ್ತಿಯಲ್ಲಿಯೇ ಮರ್ಯಾದೆಯಲ್ಲಿ ಬದುಕಿದ್ದ ದೀನಾನಾಥನು ಏನೋ ಕಾಯಿಲೆಯಿಂದ ತೀರಿಹೋದನು. ಅವನು ಹೆಂಡತಿಯನ್ನೂ ಇಬ್ಬರು ಮಗಂದಿರನ್ನೂ ಅನಾಥರನ್ನಾಗಿ ಮಾಡಿ ಹೋದಂತಾಗಿತ್ತು. ಹಿರಿಯ ಮಗನ ಹೆಸರು ಕಾಶೀನಾಥ. ಅವನಿಗೆ ಇಪ್ಪತ್ತೆಂಟು ವರ್ಷ ವಯಸ್ಸಾಗಿತ್ತು. ಮದುವೆಯೂ ಆಗಿತ್ತು. ಅದೇ ಊರಿನಲ್ಲಿ ದೊಡ್ಡ ಜಮೀನ್ದಾರರ ಕಾರ್ಯಾಲಯದಲ್ಲಿ ಊರವರಿಂದ ಬರಬೇಕಾದ ತೀರ್ವೆ ವಸೂಲುಮಾಡುವ ಉದ್ಯೋಗದಲ್ಲಿದ್ದನು. ಚಿಕ್ಕವನಾದ ನಿಶಾನಾಥ ಇನ್ನೂ ಪ್ರಾಯಕ್ಕೆ ಬಾರದ ಶಾಲೆಯಲ್ಲಿ ಕಲಿಯುತ್ತಿದ್ದ ಹುಡುಗ.

ದೊಡ್ಡವನಾದ ಕಾಶೀನಾಥನ ಸ್ವಭಾವ ಮೆಚ್ಚಿಕೊಳ್ಳುವಂತಹುವಲ್ಲ. ತಂದೆ ತೀರಿಹೋದ ಮೇಲೆ ಆಸ್ತಿ ವಿಭಾಗದಲ್ಲಿ ತಮ್ಮನಿಗೆ ಅನ್ಯಾಯ ಮಾಡಬೇಕೆಂತಲೇ ಅವನು ನಿಶ್ಚಯಿಸಿದ್ದನು. ಅದರಂತೆ ಅವನು ಊರೊಳಗಿನ ಹಿರಿಯರನ್ನು ಕರೆಯಿಸಿ ತಮಗಿರುವ ಆಸ್ತಿಯನ್ನು ಎರಡು ಸಮಪಾಲು ಮಾಡಿಸಿಕೊಂಡನು.

ಆಗ ವ್ಯಕ್ತವಾದ ಅವನ ದುರಭಿಪ್ರಾಯಗಳಿಗೆ ಪುಷ್ಟಿಸಿಗದೇ ಹೋಯಿತು. ತಾಯಿಗೆ ಚಿಕ್ಕಮಗನ ಮೇಲೆ ತುಂಬ ಮಮತೆ. ಆ ಹುಡುಗನಿಗೆ ಅಡಿಗೆ ಮಾಡಿ ಹಾಕಲಿಕ್ಕೂ ಅವಳ ಹೊರತು ಬೇರೆ ದಿಕ್ಕಿರಲಿಲ್ಲ. ಆದುದರಿಂದ ಕಾಶೀನಾಥನು ತನ್ನ ತಾಯಿಯನ್ನು ಚಿಕ್ಕ ಮಗನೊಂದಿಗೆ ಇರುವಂತೆ ಹೇಳಿ, ಅವಳಿಗೆ ತಾನು ಸ್ವಲ್ಪ ಧಾನ್ಯವನ್ನು ಪ್ರತ್ಯೇಕವಾಗಿ ಕೊಡಲಿಕ್ಕೂ ಒಪ್ಪಿಕೊಂಡನು.

ಮನೆಯ ಆವರಣದೊಳಗೆ ಒಂದು ಆ್ಯಪಿಲ್ ಮರವಿದ್ದಿತು, ಉತ್ತಮ ಜಾತಿಯದು. ಅದರ ಹಣ್ಣುಗಳು ಅತ್ಯಂತ ರುಚಿಯಾದುವು. ರುಚಿಗೆ ತಕ್ಕಂತೆ ಬಣ್ಣವೂ ಆಕರ್ಷಣೀಯವಾಗಿತ್ತು. ಆದರೆ ಆ ಮರವು ಎರಡು ಭಾಗಗಳ ನಡುವಿನ ಗೆರೆಯಲ್ಲೇ ಇದ್ದುಬಿಟ್ಟಿತ್ತು. ಅದೇ ಒಂದು ಪ್ರಶ್ನೆಯಾಗಿ ತಕರಾರಿಗಿಟ್ಟುಕೊಂಡಿತು.

ನಿಜಕ್ಕೂ ಸಂಪಾದನೆ ಮಾಡುತ್ತಿರುವ ಕಾಶೀನಾಥನು ತನ್ನ ಸಂಬಳದಿಂದಲೇ ಹೆಂಡತಿ ಮಕ್ಕಳನ್ನು ಪೋಷಿಸಲು ಸಮರ್ಥನಾಗಿದ್ದನು. ಆದುದರಿಂದ ಗ್ರಾಮದ ಹಿರಿಯರು ಆ್ಯಪಿಲ್ ಮರವನ್ನು ನಿಶಾ

---

ಎ. ಸಿ. ಸರ್ಕಾರ್, ಐಂದ್ರಜಾಲಿಕರು

ನಾಥನಿಗೇ ಬಿಟ್ಟುಬಿಡುವಂತೆ ಹೇಳಿದರು. ಕಾಶೀನಾಥನು ಅದಕ್ಕೆ ಒಪ್ಪಲಿಲ್ಲ. ಹಾಗಾದರೆ ಮರದಲ್ಲಿ ಆಗುವ ಫಲಗಳಲ್ಲಿ ಅರ್ಧಭಾಗವನ್ನು ನಿಶಾನಾಥನಿಗೆ ಕೊಡಬೇಕೆಂಟು ಹೇಳಿದರು. ಅದಕ್ಕೆ ಕಾಶೀನಾಥನು "ಹಣ್ಣುಗಳನ್ನು ಎಣಿಸಿಕೊಂಡು ಸಮಯದ ಕೊಲೆ ಮಾಡುವುದಕ್ಕಿಂತ ಆ ಮರವನ್ನೇ ಕಡಿದು ಅರ್ಧರ್ಧ ಭಾಗ ಮಾಡಿದರೆ ಮುಗಿಯಿತಲ್ಲ!" ಎಂದ ಒಂದು ಬಗೆಯ ಆವೇಶದಿಂದ.

"ಅಯ್ಯೋ, ಹಾಗೆಲ್ಲಾ ಮಾಡಿಸಿಬಿಡಬೇಡಿ. ನನಗೆ ಆ ಮರವೂ ಹಣ್ಣುಗಳೂ ಇಲ್ಲದಿದ್ದರೆ ಬೇಡ. ನನಗೆ ದೇವರ ಮೇಲೆ ನಂಬುಗೆ ಇದೆ. ಕಷ್ಟ ಕಾಲದಲ್ಲಿ ನನ್ನನ್ನು ದೇವರೇ ನೋಡಿಕೊಳ್ಳುತ್ತಾನೆ. ಹಣ್ಣು ತಿನ್ನಿಸುವುದೂ ಬಿಡುವುದೂ ಎಲ್ಲಾ ದೇವರ ಇಚ್ಚೆ!" ಎಂದ ನಿಶಾನಾಥ ವೈರಾಗ್ಯದಿಂದ.

"ಸರಿ. ಮರದ ತಂಟೆಗೆ ಯಾರೂ ಹೋಗಬೇಡಿ. ಕಾಲ ಬಂದಾಗ ದೇವರು ಬುದ್ಧಿಕೊಟ್ಟ ಹಾಗೆ ಮಾಡಿ" ಎಂದು ಹೇಳಿ ಹಿರಿಯರು ಹೊರಟು ಹೋದರು.

ದಿನಗಳು ಉರುಳುತ್ತಿದ್ದುವು. ತನ್ನ ಭಾಗದ ಆಸ್ತಿಯಲ್ಲಿ ಸಿಗುವ ಸ್ವಲ್ಪ ಮಾತ್ರ ಆದಾಯದಲ್ಲಿ ನಿಶಾನಾಥನು ಹೇಗೋ ದಿವಸ ಕಳೆಯುತ್ತಿದ್ದನು. ಅವನು ಓದಿನಲ್ಲಿ ಶ್ರದ್ಧೆವಹಿಸಿ, ಊರೊಳಗಿನ ಶಾಲೆಯಲ್ಲಿ ಕಲಿಯುವಂಥಾದ್ದೆಲ್ಲಾ ಕಲಿತುಮುಗಿಸಿ, ಮೂರು ಮೈಲಿ ದೂರವಿರುವ ಪಟ್ಟಣದ ಶಾಲೆಗೆ ಸೇರಿದನು. ದಿನಾ ಕಾಲುನಡಿಗೆಯಲ್ಲೇ ಹೋಗಿ ಬರಬೇಕಾಗಿತ್ತು. ಒಂದು ಸೈಕಲ್ ಇರುತ್ತಿದ್ದರೆ ಒಳ್ಳೆಯದೆಂದು ತೋರಿದರೂ ಅದನ್ನು ಕೊಂಡುಕೊಳ್ಳುವ ದಾರಿ ಕಾಣಲಿಲ್ಲ. ಹಣ ಉಳಿಸುವಂತಹ ಯಾವ ವ್ಯಾಪಾರವೂ ಅವನಿಗಿರಲಿಲ್ಲ ಪಾಪ.

ಆ್ಯಪಿಲ್ ಹಣ್ಣಿನ ಕಾಲವು ಬಂದಿತು. ಗಡಿಯಲ್ಲಿರುವ ಆ ಮರದಲ್ಲಿ ತುಂಬಾ ಕಾಯಿಗಳಾಗಿದ್ದುವು.



ನ್ಯಾಯವಾಗಿ ತನಗೆ ಬರಬೇಕಾದ ಅರ್ಧಭಾಗದ ಹಣ್ಣುಗಳು ಸಿಕ್ಕಿಬಿಟ್ಟರೆ, ಅದನ್ನು ಮಾರಿ ಬರುವ ಹಣದಿಂದ ಸೈಕಲ್ ಕೊಂಡುಕೊಳ್ಳಬಹುದು. ಇದೊಂದು ದೂರದ ಆಶೆಯಂತೆ ತೋರಿದುದರಿಂದ ದೇವರ ಮೇಲೆಯೇ ಭಾರ ಹಾಕಿದ್ದನು ನಿಶಾನಾಥ.

ಈ ಕಾಲದಲ್ಲಿ ಕಾಶೀನಾಥನಿಗೆ ಅಕಸ್ಮಾತ್ತಾಗಿ ಏನೋ ಖಾಯಿಲೆ ಬಂದಿತು. ವೈದ್ಯರಿಗೆ ಅವನ ರೋಗದ ಗುಟ್ಟು ಗೊತ್ತಾಗದೆ ಔಷಧಗಳನ್ನು ಬದಲಾಯಿಸಿ ನೋಡುತ್ತಿದ್ದರು. ಅವನು ಸಾವು ಬದುಕಿನ ಅಂಚಿನಲ್ಲಿ ನರಳಿಕೊಂಡಿದ್ದ.

ತನ್ನ ಅಣ್ಣನಿಗೆ ಗುಣವಾಗಬೇಕೆಂದು ನಿಶಾನಾಥನು ದೇವರಿಗೆ ಹರಕೆ ಹೇಳಿಕೊಂಡನು. ದಿನಾ ಒಂದು ಗಂಟೆ ಅಣ್ಣನಿಗಾಗಿ ದೇವರನ್ನು ಧ್ಯಾನಿಸಲೂ ತೊಡಗಿದನು. ಅವನ ಧ್ಯಾನ ಹರಕೆಗಳ ಮಹಿಮೆಯೋ, ವೈದ್ಯರ ಪ್ರಯತ್ನದ ಫಲವೋ ಯಾವುದೇ ಇರಲಿ, ಕಾಶೀನಾಥನ ರೋಗವು ಗುಣಮುಖವಾಗ



ತೊಡಗಿತು. ಆದರೂ ನಿತ್ರಾಣದಿಂದ ಮಂಚದಲ್ಲೇ ಬಿದ್ದಿದ್ದನು. ಮಾನಸಿಕವಾಗಿಯೂ ಸಹ ಏನೋ ತುಂಬ ನೋವು ಅನುಭವಿಸುತ್ತಿದ್ದ.

ಆಗ ಊರಹಿರಿಯರು ಅವನ ಬಳಿಗೆ ಬಂದು "ನೋಡಿದೆಯಾ ಕಾಶೀನಾಥ್, ನಿನಗಾಗಿ ನಿನ್ನ ತಮ್ಮನು ವಹಿಸಿದ ಶ್ರದ್ಧೆ ಗಮನಿಸಿದೆಯಷ್ಟೆ? ಅವನ ಪ್ರಾರ್ಥನೆಯಂತೆಯೇ ದೇವರು ನಿನ್ನನ್ನು ಕಾಪಾಡಿಬಿಟ್ಟ. ಇನ್ನು ಇತ್ಯರ್ಥವಾಗದಿರುವ ಆ್ಯಪಿಲ್ ಮರವನ್ನು ನಿನ್ನ ತಮ್ಮನಿಗೇ ಬಿಟ್ಟುಬಿಡು. ನಿನ್ನ ತಾಯಿ ಕೂಡಾ ಅನುಭವಿಸುತ್ತಾಳೆ. ನೀನು ಅದನ್ನು ಪರಕೀಯರಿಗೇನೂ ಬಿಟ್ಟುಕೊಡುವುದಲ್ಲವಷ್ಟೆ?" ಎಂದರು.

"ನನ್ನನ್ನು ಬದುಕಿಸಿದ ದೇವರು ನಿಶಾನಾಥನಿಗೆ ಆ್ಯಪಿಲ್ ಮರವನ್ನೂ ಕೊಡಲಿ ಹಾಗಾದರೆ. ಮಧ್ಯೆ ನನ್ನನ್ನು ಕೇಳುವ ಅಗತ್ಯವೇನಿದೆ?" ಎಂದ ಕಾಶೀನಾಥ ಅಸಮಾಧಾನದಿಂದ.

ಆ ಹಿರಿಯರೊಂದಿಗೆ ಬಂದವರಲ್ಲಿ ನಿಶಾನಾಥನ ಸಹಪಾಠಿಯಾದ ಹರಕುಮಾರನೆಂಬವನೂ ಇದ್ದ. ಕಾಶೀನಾಥ ಹೇಳಿದುದನ್ನು ಕೇಳಿ ಅವನು ತಟ್ಟನೆ ಮುಂದೆ ಬಂದು, "ಹಾಗಾದರೆ ನೀವು ದೇವರ ನಿರ್ಣಯಕ್ಕೆ ಒಪ್ಪುವಿರಿ ತಾನೆ?" ಎಂದು ಕೇಳಿದ.

"ಆ ಮರ ಯಾರಿಗೆ ಸೇರಬೇಕೆಂದು ದೇವರೇ ನಿರ್ಣಯಿಸುವ ಹಾಗಿದ್ದರೆ ಖಂಡಿತಾ ಆ ನಿರ್ಣಯಕ್ಕೆ ನಾನು ಕಟ್ಟುಬೀಳುತ್ತೇನೆ" ಎಂದ ಕಾಶೀನಾಥ.

"ಈ ಮಾತು ತಪ್ಪುವುದಿಲ್ಲವೆಂದು ನಿಮ್ಮ ಮಗ ರಾಮನಾಥನ ಮೇಲೆ ಆಣೆ ಹಾಕಿ ಹೇಳುವಿರಾ?" ಎಂದು ಹರಕುಮಾರ ಕೇಳಲು, "ಹಾಗೆಯೇ ಆಣೆ ಹಾಕುತ್ತೇನೆ" ಎಂದ ಕಾಶಿನಾಥ್, ಆದರೆ "ದೇವರ ನಿರ್ಣಯ ಹೇಗೆ ಗೊತ್ತಾಗುತ್ತದೆ?" ಎಂದು ತಿರುಗಿ ಕೇಳಿದ ಕಾಶೀನಾಥ್.

"ಅದು ದೇವರಿಗೇ ಗೊತ್ತು" ಎಂದು ಹರಕುಮಾರ್ ಹೇಳಲು, "ದೇವರು ನನ್ನ ಮೇಲೆ ಹಾಗೆಲ್ಲಾ ಅನುಗ್ರಹ ಮಾಡಲು ನಾನೇನು ಅಷ್ಟು ದೊಡ್ಡ ಭಕ್ತನೆ?" ಎಂದ ನಿಶಾನಾಥ್.

"ಭಕ್ತಿಯಲ್ಲಿ ದೊಡ್ಡದು ಸಣ್ಣದು ಅಂತ ಇಲ್ಲಪ್ಪ. ನಿನ್ನ ಅಣ್ಣ ಮಾಡಿದ ಪ್ರಮಾಣ ಮರೆಯದಿದ್ದರೆ ಆ್ಯಪಿಲ್ ಮರ ನಿನ್ನದೆಂದೇ ನಂಬು" ಎಂದು ಹರಕುಮಾರ್ ನಿಶಾನಾಥನ ಬೆನ್ನು ತಟ್ಟಿದ.

ಹಾಗೆಯೇ ಅವನು ಕಣ್ಣು ಮಿಟುಕಿಸಿ, ಗುಟ್ಟಿನಿಂದ "ದೇವರು ಸ್ವಯಂ ಹೊರಟುಬಂದು ಏನೂ ಮಾಡುವುದಿಲ್ಲ. ಕೆಲವರಿಗೆ ಹೆಚ್ಚಿನ ಬುದ್ಧಿವಂತಿಕೆಯನ್ನು ಕೊಟ್ಟು ಅವರ ಮೂಲಕವಾಗಿ ಮಾಡಿಸುತ್ತಾನೆ. ನಿನ್ನ ಸಂಗತಿಯನ್ನು ನಮ್ಮ ಮಿತ್ರ ನಕುಲನ ಹತ್ತಿರ ಹೇಳಿ ಅವನ ಉಪಾಯ ಕೇಳುತ್ತೇನೆ. ಅವನು ಇಂದ್ರಜಾಲ ಕಲಿತ ವಿಶೇಷ ಬುದ್ಧಿವಂತ. ನಿನ್ನ ಸಮಸ್ಯೆಯನ್ನು ಹೇಗಾದರೂ ಬಗೆಹರಿಸುತ್ತಾನೆ ತಿಳಿಯಿತೆ?" ಎಂದನು.

ಆ ಮೇಲೆ ಎರಡು ದಿನಗಳು ಕಳೆದುವು. ಮೂರನೇ ದಿನ ಊರೊಳಗಿನ ಹಿರಿಯರು ಕಾಶೀನಾಥನ ಮನೆಯ ಆ್ಯಪಿಲ್ ಮರದ ಬುಡದಲ್ಲಿ ಕೂಡಿದರು. ಹರಕುಮಾರ್ ಎದ್ದು ನಿಂತು, "ನಾವೆಲ್ಲರೂ ದೇವರ ನಿರ್ಣಯಕ್ಕಾಗಿ ಕಾದಿದ್ದೇವೆ. ದೇವರು ಪ್ರತ್ಯಕ್ಷವಾಗಿ ಬರುವವರಲ್ಲ. ಈ ಮರವು ನಿಶಾನಾಥನಿಗೇ ಸೇರಬೇಕೆಂಬುದು ದೇವರ ಉದ್ದೇಶವಾಗಿದ್ದ ಪಕ್ಷದಲ್ಲಿ ಅದಕ್ಕೆ ತಕ್ಕ ದಾಖಲೆ ಈ ಮರದಲ್ಲಿಯೋ, ಇದರ ಹಣ್ಣಿನಲ್ಲಿಯೋ ಕಂಡು ಬರಬೇಕು. ನಾನು ಈ ಮರವನ್ನು ಹತ್ತಿ ಎರಡು ಮೂರು ಹಣ್ಣುಗಳನ್ನು ಕೊಯಿದು ತರುತ್ತೇನೆ. ಏನಾದರೂ ದೇವರ ದಾಖಲೆ ಸಿಗುವುದೋ ನೋಡೋಣ" ಎಂದನು.

ಸರಿಸರಿ ಎಂದು ಎಲ್ಲರೂ ತಲೆಯಾಡಿಸಿದರು. ಹರಕುಮಾರ್ ಮರಕ್ಕೆ ನಮಸ್ಕಾರ ಮಾಡಿ ಮರವನ್ನು ಹತ್ತಿ, ಬೇರೆ ಬೇರೆ ಕೊಂಬೆಗಳಿಂದ ಎರಡು ಮೂರು ಹಣ್ಣುಗಳನ್ನು ಕೊಯಿದು, ಅವುಗಳನ್ನು ತನ್ನ ಜೇಬಿನೊಳಗಿಟ್ಟುಕೊಂಡು ಕೆಳಗಿಳಿದನು. ಆಮೇಲೆ ಜೇಬಿನಿಂದ ಹಣ್ಣುಗಳನ್ನು ತೆಗೆದು ಎಲ್ಲರಿಗೂ ತೋರಿಸಿದನು. ಅವುಗಳಲ್ಲಿ ಪ್ರತ್ಯೇಕವಾಗಿ ದೇವರ ದಾಖಲೆ ಯಾವುದೂ ಕಾಣಲಿಲ್ಲ.

"ಹಣ್ಣಿನ ಒಳಗೆ ಏನಾದರೂ ವಿಶೇಷ ದಾಖಲೆ ಸಿಗುವುದೋ ನೋಡೋಣ" ಎಂದು ಹರಕುಮಾರ್ ಕಾಶೀನಾಥನ ಕೈಗೆ ಒಂದು ಆ್ಯಪಿಲ್ ಹಣ್ಣನ್ನೂ ಚೂರಿಯನ್ನೂ ಕೊಟ್ಟು, ಅದರ ಸಿಪ್ಪೆ ತೆಗೆದು ವಿಶೇಷವಿದೆಯೋ ನೋಡುತ್ತಾ ಜಾಗರೂಕತೆಯಿಂದ ಹಚ್ಚುವಂತೆ ಹೇಳಿದನು.

ಕಾಶೀನಾಥನು ಆ ಹಣ್ಣಿನ ಸಿಪ್ಪೆ ತೆಗೆದಾಗ, ಒಳಗಿನ ಹಣ್ಣು ಸರೀ ಎರಡು ಭಾಗವಾಗಿ ಸೀಳಿಕೊಂಡಿರುವುದನ್ನು ನೋಡಿ ಅತ್ಯಾಶ್ಚರ್ಯಪಟ್ಟನು. ಇನ್ನೊಂದು ಹಣ್ಣನ್ನು ಕೂಡಾ ಅದೇರೀತಿ ಸಿಪ್ಪೆ ಕೆತ್ತಿದಾಗ, ಅದೂ ಒಳ ಭಾಗದಲ್ಲಿ ಇಬ್ಭಾಗವಾಗಿ ಸೀಳಿತ್ತು! ದೇವರ ದಾಖಲೆ ಸ್ಪಷ್ಟವಾಯಿತು. "ಆಹಾ! ದೇವರ ಮಹಿಮೆ! ಅತ್ಯದ್ಭುತ!"



ಎಂದು ಎಲ್ಲರೂ ಬಾಯಿ ಬಿಟ್ಟು ಬೆರಗಾದರು. ವೃದ್ಧನಾದ ಊರಪ್ರಮುಖನೊಬ್ಬ ಭಕ್ತಿಯಿಂದ ಕಂಬನಿದುಂಬಿದವನಾಗಿ ಕಾಶೀನಾಥನೊಂದಿಗೆ, "ಅಪ್ಪಾ! ಇದು ದೈವನಿರ್ಣಯವೇ ನಿಜ! ಈಗಾದರೂ ಈ ಮರವನ್ನು ನಿನ್ನ ತಮ್ಮನಿಗೆ ಕೊಟ್ಟುಬಿಡು. ನಿರ್ಮಲಮನಸ್ಸಿನಿಂದ ಕೊಡಪ್ಪ!" ಎಂದನು.

"ಕೊಡದೇ ಇರುವೆನೇ? ನನ್ನ ಮಗನ ಮೇಲೆ ಆಣೆ ಹಾಕಿದ್ದೇನಲ್ಲಾ! ಈ ಮರವು ಇಂದಿನಿಂದ ನಿಶಾನಾಥನದೇ" ಎಂದ ಕಾಶೀನಾಥ್.

ನಿಶಾನಾಥನ ಚಿಂತೆ ದೂರಾಯಿತು. ಅವನು ಆ ಮರದ ಹಣ್ಣುಗಳನ್ನು ಮಾರಿ, ಬಂದ ಹಣದಿಂದ ಒಂದು ಸೈಕಲ್ಲು ಕೊಂಡುಕೊಂಡನು. ಒಂದು ದಿನ ಅವನು ತನ್ನ ಹೊಸ ಸೈಕಲ್ಲಿನಲ್ಲಿ ಹರಕುಮಾರನನ್ನು ಕೂರಿಸಿಕೊಂಡು ಪಟ್ಟಣಕ್ಕೆ ಹೋಗುತ್ತ, "ಅಲ್ಲಪ್ಪಾ ಹರಕುಮಾರ್, ಆ್ಯಪಿಲ್ ಹಣ್ಣಿನೊಳಗೆ ಹಾಗೆ ಸೀಳಿದ್ದುದು ನನಗೇನೋ ಸಂದೇಹವಾಗಿದೆ. ನಿಜಕ್ಕೂ ಅದು ದೇವರ ಕೆಲಸವೇನಾ?" ಎಂದು ಕೇಳಿದ.

"ದೇವರು ಅನುಗ್ರಹಿಸಿದ ಬುದ್ಧಿಯ ಕೆಲಸವಪ್ಪಾ. ಅದೆಲ್ಲಾ ನನ್ನ ಮಿತ್ರ ನಕುಲ ಮಾಡಿದ ಕೆಲಸ" ಎಂದ ಹರಕುಮಾರ್. ಹೇಗೆಂಬುದನ್ನೂ ಹರಕುಮಾರ್ ವಿವರಿಸಿ ಹೇಳಿದ.

"ಅವನು ಹೇಳಿದ ಹಾಗೆ ನಾನು ರಾತ್ರಿಯಲ್ಲಿ ಮರ ಹತ್ತಿ ಯಾರಿಗೂ ಗೊತ್ತಾಗದ ಹಾಗೆ ಕೆಲವು ಆ್ಯಪಿಲ್ ಹಣ್ಣುಗಳನ್ನು ಕೊಯಿದುಕೊಂಡು ಹೋದೆ. ಆಮೇಲೆ ಸೂಜಿಗೆ ನೂಲು ಹಾಕಿ, ಆ ಸೂಜಿಯನ್ನು ಹಣ್ಣಿನ ಸಿಪ್ಪೆಯ ಅಡಿಯಲ್ಲಿ ಅಡ್ಡವಾಗಿ ಚುಚ್ಚಿ, ಅದನ್ನು ಸಿಪ್ಪೆಯ ಅಡಿಭಾಗದಲ್ಲೇ ತಳ್ಳುತ್ತಾ ಹಣ್ಣಿನ ಆಚೆಯ ಬದಿಗೆ ಒಯ್ದೆ. ತರುವಾಯ ಆ ಸೂಜಿಯನ್ನು ಎರಡನೆ ಬದಿಯಿಂದ ಸಿಪ್ಪೆಯ ಬುಡದಲ್ಲೇ ಮೊದಲು ಚುಚ್ಚಿದಲ್ಲಿಗೆ ತಂದೆ. ಅಂದರೆ ಹಣ್ಣಿನ ಸಿಪ್ಪೆಯ ಕೆಳಗಿನಿಂದ ದಾರವು ಹಣ್ಣನ್ನು ಸುತ್ತಿ ಬಂದಂತಾಯಿತು. ಆಮೇಲೆ ದಾರದ ಎರಡೂ ಕೊನೆಗಳನ್ನೂ ಹಿಡಿದುಕೊಂಡು ಎಳೆದೆ. ಆಗ ಒಳಗಿನ ಹಣ್ಣನ್ನು ದಾರವು ಎರಡು ಭಾಗವಾಗಿ ಸೀಳಿ ಹೊರಕ್ಕೆ ಬಂದುಬಿಟ್ಟಿತು. ಅನಂತರ ಹಣ್ಣನ್ನು ಬಟ್ಟೆಯಿಂದ ತಿಕ್ಕಿ ಹೊಳಪುಕೊಟ್ಟ ಮೇಲೆ ಸೂಜಿಯಿಂದ ಮಾಡಿದ ತೂತು ಕಾಣದೆ ಹೋಯಿತು. ಹೀಗೆ ಸಿದ್ಧಮಾಡಿಕೊಂಡ ಆ್ಯಪಿಲ್ ಹಣ್ಣುಗಳೊಂದಿಗೆ ಮರದ ಮೇಲೆ ಏರಿ, ಆಗ ಮರದಿಂದ ಕಿತ್ತ ಹಣ್ಣುಗಳಿಗೆ ಬದಲಾಗಿ, ಮೊದಲೇ ಸಿದ್ಧಮಾಡಿಟ್ಟ ಹಣ್ಣುಗಳನ್ನು ತೆಗೆದು ಕಾಶೀನಾಥನ ಕೈಗೆ ಹೆಚ್ಚಲು ಕೊಟ್ಟೆ, ಅಷ್ಟೇ. ಇಡೀ ಮರವೇ ನಿನ್ನದಾಯಿತು."





# ಗುಟ್ಟುರಟ್ಟು

ಒಂದು ಊರಿನಲ್ಲಿ ಆನಂದನೆಂಬವನಿಗೆ ನಗರದ ಒಂದು ಅಂಗಡಿಯಲ್ಲಿ ಗುಮಾಸ್ತಿಕೆ ಕೆಲಸ ಸಿಕ್ಕಿತು. ಕೆಲಸ ಖಾಯಂ ಆದ ಮೇಲೆ ಅವನು ಮೀನಾಕ್ಷಿ ಎಂಬವಳನ್ನು ಮದುವೆಯಾಗಿ ಮನೆಬಾಗಿಲು ಮಾಡಿಕೊಂಡು ಇರತೊಡಗಿದನು. ಅವಳನ್ನು ಮನೆ ಹೊಗಿಸಿದ ಮೊದಲನೇ ದಿನದಲ್ಲೇ ಅವನು ಕೆಲಸಕ್ಕೆ ಹೊರಡುವಾಗ ಮೀನಾಕ್ಷಿಯೊಂದಿಗೆ, "ಇದು ನಿನಗೆ ಹೊಸ ಊರು. ನಾನೀಗ ಅಂಗಡಿಗೆ ಹೋಗುತ್ತೇನೆ. ಒಬ್ಬಳು ಮೆಳ್ಳೆಗಣ್ಣಿನ ಮುದುಕಿ ಈ ಊರಿನಲ್ಲಿದ್ದಾಳೆ. ಅವಳನ್ನು ಮನೆಯೊಳಗೆ ಬಿಡಬೇಡ!" ಎಂದು ಹೇಳಿ ಹೊರಟುಹೋದನು.

"ಮೆಳ್ಳೆಗಣ್ಣಿನ ಮುದುಕಿ"ಯನ್ನೇ ನೆನೆಯುತ್ತ ಮೀನಾಕ್ಷಿ ಮನೆಬಾಗಿಲು ಹಾಕಿ, ಒಳಗಿನ ಚಿಕ್ಕ ಪುಟ್ಟ ಕೆಲಸಗಳನ್ನು ಮುಗಿಸಿ ಕಿಟಕಿಯ ಮೂಲಕ ಹೊರಗೆ ನೋಡಿದಳು. ಆಗ ಮನೆಯ ಮುಂದೆ ಮೆಳ್ಳೆಗಣ್ಣಿನ ಮುದುಕಿಯೊಬ್ಬಳು ಅತ್ತಿತ್ತ ಎಡತಾಕಿಕೊಂಡಿದ್ದುದನ್ನು ನೋಡಿ ಹೆದರಿ ಕಿಟಕಿಯಬಾಗಿಲು ಹಾಕಿದಳು.

ಕತ್ತಲಾಗಿ ದೀಪ ಹಚ್ಚುವ ವೇಳೆಗೆ ಆನಂದನು ಮನೆಗೆ ಬಂದ. ತಾನು ಮೆಳ್ಳೆಗಣ್ಣಿನ ಮುದುಕಿಯನ್ನು ನೋಡಿದೆನೆಂದು ಮೀನಾಕ್ಷಿ ಅವನಿಗೆ ಹೇಳಿದಳು. ಅವಳನ್ನು ಮನೆಯೊಳಗೆ ಬಿಡದಿರುವುದನ್ನು ತಿಳಿದು ಸಂತೋಷಿಸುತ್ತ ಹೆಂಡತಿಗೆ ಮತ್ತೊಮ್ಮೆ ಎಚ್ಚರಿಕೆ ಕೊಟ್ಟನು.

ದಿನಾ ಆ ಮನೆಯ ಮುಂದೆ ಮುದುಕಿಯೊಬ್ಬಳು ಎಡತಾಕುತ್ತಾ ಇದ್ದಳು. ಮೀನಾಕ್ಷಿ ಅವಳನ್ನು ನೋಡಿಯೂ ನೋಡದಂತೆ ಮುಖಮಾಡಿಕೊಂಡು ಸುಮ್ಮನಿದ್ದಳು. ಆದರೆ ಕಡೆಗೊಂದು ದಿನ ಮೀನಾಕ್ಷಿಗೆ ದೊಡ್ಡ ಅನುಮಾನವಾಯಿತು. ಸೊಂಟ ಮುರಿದು ಹೋದ ಆ ಮೆಳ್ಳೆಗಣ್ಣಿನ ಮುದುಕಿಯ ಮೇಲೆ ತನ್ನ ಗಂಡನಿಗೆ ಅಷ್ಟೊಂದು ಹಗೆ ಏಕೋ? ಏನೋ ಗುಟ್ಟು ಇರಲೇಬೇಕು.

ಇಂತಹ ಅನುಮಾನ ಹುಟ್ಟಿದ ಮೇಲೆ ಅವಳಿಗೆ ತಾಳಿಕೊಳ್ಳಲು ಸಾಧ್ಯವಾಗಲಿಲ್ಲ. ಗಂಡನನ್ನೇ ಕೇಳಲು ಭಯ. ಅದೇನೋ ತನ್ನೊಂದಿಗೆ ಹೇಳಬಾರದಂತಹ ಗುಟ್ಟೇ ಆಗಿರಬೇಕು. ಇಲ್ಲದಿದ್ದರೆ ಅವನಾಗಿಯೇ ಹೇಳುತ್ತಿದ್ದನು. ಆದುದರಿಂದ ಅವಳು ನೋಡಿಯೇ ಬಿಡುವುದೆಂಬ ಸಾಹಸಕ್ಕಿಳಿದು ಮನೆಯ ಬಾಗಿಲನ್ನು ತೆರೆದು ಆ ಮುದುಕಿಯನ್ನು ಮನೆ

ಎಂ. ಕೆ. ಈಶ್ವರರಾವ್



ಯೊಳಗೆ ಬರುವಂತೆ ಕರೆದಳು. ಸಂತೋಷದಿಂದ ಮುದುಕಿಯ ಮುಖ ಮೊರದಷ್ಟು ಅಗಲವಾಯಿತು. ಅವಳು ಒಳಗೆ ಬಂದು ಮೀನಾಕ್ಷಿಯೊಂದಿಗೆ ಅತ್ಯಂತ ಮಮತೆಯಿಂದ ಮಾತಾಡತೊಡಗಿದಳು.

ಮುದುಕಿಯ ಮುಖವು ವಿಕಾರವಾಗಿದ್ದರೂ ಅವಳ ಮಾತಿನಲ್ಲಿ ಏನೋ ಆಕರ್ಷಣೆ ಇದ್ದಿತು. ಅವಳು ಮೀನಾಕ್ಷಿ ತಂದಿಟ್ಟ ಫಲಾಹಾರವನ್ನು ತಿನ್ನುತ್ತ, "ನೀನು ತುಂಬಾ ಒಳ್ಳೇವಳಮ್ಮ. ಕಂದಾ, ನಿನ್ನ ನೋಡುತ್ತಿದ್ದ ಹಾಗೆ ನನ್ನ ಹೊಟ್ಟೆ ಉರಿಯುತ್ತೆ ಕಣೆ! ಹೇಳದಿದ್ದರೆ ಹೇಗಮ್ಮಾ? ನಿನ್ನ ಗಂಡನಿಗೆ ಇಲ್ಲದ ದುರಭ್ಯಾಸವೇ ಇಲ್ಲ. ದಿನಾ ಸಾಯಂಕಾಲ ಊರ ಕೊನೆಯಲ್ಲಿರುವ ಕೊಟ್ಟಿಗೇಲಿ ಜೂಜಾಡಿ ಇದ್ದ ದುಡ್ಡನ್ನೆಲ್ಲಾ ಕಳೆದುಕೊಂಡು ಕತ್ತಲೆಯಲ್ಲಿ ಮುಖ ಮರೆಸಿಕೊಂಡು ಮನೆಗೆ ಬರುತ್ತಾನೆ. ನನ್ನ ಮಾತಿನಲ್ಲಿ ನಂಬುಗೆಯಿಲ್ಲದಿದ್ದರೆ ಸಾಯಂಕಾಲ ನೀನೇ ಅಲ್ಲಿಗೆ ಹೋಗಿ ನೋಡಬಹುದು." ಎಂದು ಹೇಳಿ ಸ್ವಲ್ಪ ಹೊತ್ತು ಕುಳಿತು ಎದ್ದು ಹೊರಟುಹೋದಳು.

ತನ್ನ ಗಂಡನು ಜೂಜುಗಾರನೆಂದು ತಿಳಿದು ಮೀನಾಕ್ಷಿಗೆ ತುಂಬ ಕಳವಳವಾಯಿತು. ತನ್ನ ಗುಟ್ಟು ರಟ್ಟಾಗುತ್ತದೆಂತಲೇ ಆ ಮುದುಕಿಯನ್ನು ಮನೆಯೊಳಗೆ ಸೇರಿಸಬಾರದೆಂದು ಹೇಳಿದ್ದಾನೆಂದಾಯಿತು.

ಆ ದಿನ ಸಾಯಂಕಾಲ ಅವಳು ಬಾಗಿಲುಗಳನ್ನು ಮುಚ್ಚಿ ಬೀಗ ಹಾಕಿ ಊರ ಕೊನೆಯಲ್ಲಿದ್ದ ಕೊಟ್ಟಿಗೆಯ ಬಳಿಗೆ ಹೋಗಿ ಒಳಗೆ ಹಣಿಕಿ ನೋಡಿದಳು. ಅಲ್ಲಿ ಕೆಲವರು ಜೂಜಾಡುತ್ತಿದ್ದುದು ನಿಜವೇ. ಆದರೆ ಆನಂದನು ಮಾತ್ರ ಅಲ್ಲಿರಲಿಲ್ಲ.

"ಆ ಮುದುಕಿ ಏನೋ ಕುತ್ಸಿತ ಬುದ್ಧಿಯುವಳಾಗಿರಬೇಕು. ಗಂಡಹೆಂಡಿರ ನಡುವೆ ಜಗಳ ತಂದು ತಮಾಷೆ ನೋಡುವವಳಾಗಿರಬೇಕು" ಎಂದುಕೊಂಡು ಅವಳು ಮನೆಗೆ ಹಿಂದಿರುಗಿದಳು. ಆಗ ಮನೆಯ ಹಿಂದಿನ ಭಾಗದಲ್ಲಿದ್ದ ಕೆಲವು ಪಾತ್ರಗಳೂ, ಬಕ್ಕೆಟು ತಪ್ಪಲೆಗಳೂ ಮಾಯವಾಗಿದ್ದುವು. ಯಾರೋ ಗೋಡೆ ಹಾರಿ ಬಂದು ಎತ್ತಿಕೊಂಡು ಹೋಗಿದ್ದಾರೆ.

ಸ್ವಲ್ಪ ಹೊತ್ತಿನ ಮೇಲೆ ಗಂಡ ಮನೆಗೆ ಬಂದ ಕೂಡಲೇ ಅವಳು ಅಳುಮೋರೆ ಮಾಡಿಕೊಂಡು, ನಡೆದ ಸಂಗತಿಯನ್ನೆಲ್ಲಾ ಒಂದು ಬಿಡದೆ ಹೇಳಿ, "ನಿಮ್ಮ ಮಾತುಕೇಳದೆ ಆ ಮೆಳ್ಳೆಗಣ್ಣಿನ ಧುಮಿಶನಿಯನ್ನು ಮನೆಯೊಳಗೆ ಕರೆದುದಕ್ಕೆ ತಕ್ಕ ಶಾಸ್ತಿಯಾಯಿತು, ಬುದ್ಧಿ ಬಂತು" ಎಂದಳು.

"ಅದಕ್ಕೇ ಅವಳನ್ನು ಸೇರಿಸಬೇಡಾ ಅಂದೆ. ಈ ಕಳ್ಳತನ ಕೂಡಾ ಆಕೆಯದೇ ಕೆಲಸ. ಹೀಗೆ ಹಾರಿ ಧುಮುಕಿ ಕಳವು ಮಾಡಲಿಕ್ಕೆ ಅವಳಿಗೆ ಒಬ್ಬ ಮೊಮ್ಮಗ ಇದ್ದಾನೆ. ಅವನೊಬ್ಬ ಕಳ್ಳ ಅಂತ ಎಲ್ಲರಿಗೂ ಗೊತ್ತು. ಅವನನ್ನು ಹಿಡಿಯಲು ಯಾರಿಗೂ ಸಾಧ್ಯವಾಗಲಿಲ್ಲ. ಸಾಕ್ಷ್ಯಾಧಾರಗಳೆಲ್ಲ ಸರಿಯಾಗಿರಬೇಕಷ್ಟೇ" ಎಂದ ಆನಂದ. ಈ ಸಂಗತಿ ಕೇಳಿ ಮೀನಾಕ್ಷಿಗೆ ಮುದುಕಿಯ ಕುತ್ತಿಗೆ ಹಿಚುಕಿ ಕೊಂದು

ಬಿಡಬೇಕೆಂಬಷ್ಟು ಕೋಪ ಬಂದಿತು. ಹೇಗಾದರೂ ಅವಳ ಆಟ ನಿಲ್ಲಿಸಬೇಕೆನಿಸಿತು. ಅವಳಿಗೆ ಬುದ್ಧಿ ಕಲಿಸಲು ತಕ್ಕುದಾದ ಒಂದು ಉಪಾಯವನ್ನು ಆಲೋಚಿಸಿ ಗಂಡನೊಂದಿಗೆ ಹೇಳಿದಳು.

ಆಗಿಂದಾಗಲೇ ಅವಳು ಒಂದು ಪೆಟ್ಟಿಗೆಯನ್ನು ಕೈಯಲ್ಲೆತ್ತಿಕೊಂಡು ಮನೆಗೆ ಬೀಗ ಹಾಕಿ ಆ ಮುದುಕಿಯ ಮನೆಗೆ ಹೊರಟಳು. ಮನೆಯಲ್ಲಿ ಮುದುಕಿಯೂ ಅವಳ ಕಳ್ಳ ಮೊಮ್ಮಗನೂ ಇದ್ದರು. ಮೀನಾಕ್ಷಿಯನ್ನು ನೋಡಿದ ಕೂಡಲೇ ಮುದುಕಿಯ ಮುಖದ ರಂಗು ಬದಲಾವಣೆಗೊಂಡಿತು.

"ನನ್ನ ಯಜಮಾನರ ಗುಟ್ಟನ್ನು ನನಗೆ ಹೇಳಿ ತುಂಬಾ ಪುಣ್ಯ ಕಟ್ಟಿಕೊಂಡ್ರೀ ಅಜ್ಜಿ. ಇನ್ನು ನಾನು ಆ ಮನೇಲಿ ಒಂದು ಕ್ಷಣ ಕೂಡಾ ಇರಲಾರೆ. ನನಗೆ ಗಂಡನೂ ಬೇಡ, ಏನೂ ಬೇಡ" ಎನ್ನುತ್ತಾ ಮೀನಾಕ್ಷಿ ಸೆರಗಿನಿಂದ ಮುಖ ಮುಚ್ಚಿಕೊಂಡು ಅಳುವ ಹಾಗೆ ನಟಿಸಿದಳು. ಮುದುಕಿಗೆ ಆಶ್ಚರ್ಯವಾಯಿತು. ತಾನು ಬಾಯಿಗೆ ಬಂದ ಹಾಗೆ ಏನೋ ಹೇಳಿದ ಸುಳ್ಳು ಈಗ ನಿಜವಾದುದನ್ನು ತಿಳಿದು ಮುದುಕಿಗೆ ಬಹಳ ಸಂತೋಷವಾಯಿತು. ಅವಳು ಮೀನಾಕ್ಷಿಯನ್ನು ಆದರದಿಂದ ಕರೆದೊಯ್ದು ಮಂಚದ ಮೇಲೆ ಕೂಡಿಸಿದಳು. ಮೀನಾಕ್ಷಿ ಮುದುಕಿಯೊಂದಿಗೆ ಪುನಃ ಹೀಗೆ ಹೇಳಿದಳು: "ನನ್ನ ಈ ಕರ್ಮದ ಗಂಡ ಬರೀ ಜೂಜುಗಾರ ಮಾತ್ರವೇ ಅಲ್ಲ ಅಜ್ಜೀ; ಕುಡಿತಾನೇ. ಒಂದೊಂದು ದಿನ ಅರ್ಧರಾತ್ರಿಯಾದರೂ ಮನೆಗೆ ಬರೋದಿಲ್ಲ. ಆದಕ್ಕೇ ಬೀಗ ಹಾಕಿ ಬಂದುಬಿಟ್ಟೆ. ಬೆಳಗಾದ ಕೂಡಲೇ ಗಾಡಿ ಕಟ್ಟಿಸಿಕೊಂಡು ನನ್ನ ತವರು ಮನೆಗೆ ಹೋಗಿಬಿಡುತ್ತೇನೆ. ನೀವು ನಮ್ಮ ಮನೆಯ ಹತ್ತಿರವೇ ಇದ್ದು ನನ್ನ ಗಂಡ ಬಂದ ಕೂಡಲೇ ಈ ಬೀಗದ ಕೈಕೊಟ್ಟುಬಿಡಿ" ಎಂದಳು.

ಮುದುಕಿ ಅವಳು ಹೇಳಿದ ಮಾತುಗಳನ್ನು ನಂಬಿ, "ಕಂದಾ, ನೀನು ನನ್ನ ಮಗಳಿದ್ದ ಹಾಗಮ್ಮ. ಇಷ್ಟು ಸಣ್ಣ ಸಹಾಯ ಮಾಡಲಾರೆನೇ? ಸ್ವಲ್ಪ ದಿನ ಒಬ್ಬನೇ ಇದ್ದರೆ ಅವನಿಗೆ ಬುದ್ಧಿ ಬಂದೀತು." ಎಂದು ಹೇಳಿ ಬೀಗದ ಕೈಯನ್ನು ತೆಗೆದುಕೊಂಡಳು.



"ಕುತ್ತಿಗೆವರೆಗೆ ಕುಡಿದು ತಂದಾನಾ ಅಂತ ಕುಣೀತಾ ಬಂದವರು ನಿಮ್ಮ ಮೇಲೆ ಕೈಮಾಡಲಿಕ್ಕೂ ಸಾಕು. ಪಾಪ, ನಿಮಗೇನೂ ಆಗಬಾರದಲ್ಲ! ಜತೆಗೆ ನಿಮ್ಮ ಹುಡುಗನನ್ನು ಸಹಾ ಕರಕೊಂಡು ಹೋಗಿ ಅಜ್ಜೀ" ಎಂದಳು ಮೀನಾಕ್ಷಿ.

ಈ ಆಲೋಚನೆ ಅವಳು ಹೇಳುವುದಕ್ಕಿಂತ ಮೊದಲೇ ಮುದುಕಿಗೆ ಬಂದಿತ್ತು. ಅದನ್ನೇ ಮೀನಾಕ್ಷಿ ಹೇಳಿದುದರಿಂದ ಅವಳು ಇನ್ನಷ್ಟು ಸಂತೋಷಪಟ್ಟು ತನ್ನ ಮೊಮ್ಮಗನನ್ನು ಕರೆದುಕೊಂಡು ಮೀನಾಕ್ಷಿಯ ಮನೆಗೆ ಆಗಲೇ ಹೊರಟುಬಿಟ್ಟಳು. ಮಧ್ಯರಾತ್ರಿಯ ವರೆಗೂ ಮನೆಯವನು ಬರುವಂತಿಲ್ಲ. ತನ್ನ ಹೋಳಿಗೆ ಜಾರಿ ತುಪ್ಪದಲ್ಲಿ ಬಿದ್ದ ಹಾಗೇ ಸರಿ. ಮನೆ ಪೂರ್ತಿ ಚೊಕ್ಕಮಾಡಿ ಬಿಡಬಹುದು ಎಂದುಕೊಂಡಳು.

ಅಜ್ಜಿಯೂ ಮೊಮ್ಮಗನೂ ಕತ್ತಲೆಯಲ್ಲಿ ಮೀನಾಕ್ಷಿಯ ಮನೆಗೆ ಹೋಗಿ ಬೀಗ ತೆರೆದು ಒಳಗಿದ್ದುದನ್ನೆಲ್ಲಾ ಗಂಟು ಕಟ್ಟಿಕೊಂಡರು. ಆಮೇಲೆ ಹಿಂದಿನ ಬಾಗಿಲಿನಿಂದ ಆ ಊರು ಬಿಟ್ಟೇ ಹೋಗಿಬಿಡಬೇಕೆಂದುಕೊಂಡು, ಹಿಂದಿನ ಬಾಗಿಲನ್ನು ತೆರೆದು ಹೊರಗೆ ಕಾಲಿಟ್ಟಕೂಡಲೇ ಸ್ತಬ್ಧರಾಗಿ ಹೋದರು.

ಅಲ್ಲಿ ಹತ್ತುಮಂದಿ ಕಟ್ಟಾಳುಗಳು ಕೋಲು ದೊಣ್ಣೆ ದೀಪಗಳೊಂದಿಗೆ ನಿಂತಿದ್ದರು. ಅದನ್ನು ನೋಡಿ ಮುದುಕಿಯೂ ಮೊಮ್ಮಗನೂ ಮೂಟೆಗಳನ್ನು ಕೆಳಗೆ ಹಾಕಿ ಬೀದಿ ಬಾಗಿಲ ಕಡೆಗೆ ಓಡಲು ಪ್ರಯತ್ನಿಸಿದರು. ಅಲ್ಲಿ ಆನಂದನು ಮತ್ತೆ ಹತ್ತು ಜನರೊಂದಿಗೆ ತಯಾರಾಗಿದ್ದನು.

"ಬಹಳ ದಿನಗಳಿಂದ ಕಳ್ಳತನ ಮಾಡುವ ನೀವುಗಳು ಈ ದಿನ ಸಿಕ್ಕಿಬಿದ್ದಿರಿ. ನಿಮ್ಮ ಪಾಪದ ಫಲ ಹಣ್ಣಾಯಿತು. ಮರ್ಯಾದೆಯಿಂದ ಊರೊಳಗೆ ಕದ್ದುದನ್ನೆಲ್ಲ ತೋರಿಸಿಬಿಡಿ. ಇಲ್ಲದಿದ್ದರೆ ಎಲುವುಗಳನ್ನು ಎಣಿಸುತ್ತೇವೆ" ಎಂದ ಆನಂದ.

ಪೆಟ್ಟುಗಳಿಗೆ ಹೆದರಿ ಇಬ್ಬರೂ ಶರಣಾಗತರಾದರು. ಮುದುಕಿ ಎಲ್ಲರನ್ನೂ ತನ್ನ ಮನೆಗೇ ಕರೆತಂದಳು. ಅಷ್ಟರಲ್ಲಿ ಮೀನಾಕ್ಷಿ ಆ ಮನೆಯೊಳಗಿದ್ದ ಸಾಮಾನುಗಳನ್ನೆಲ್ಲಾ ತಂದು ಮುಂದಿನ ಕೋಣೆಯಲ್ಲಿ ಇಟ್ಟಿದ್ದಳು. ಅವಷ್ಟೂ ಕಳುವಿನ ಸೊತ್ತುಗಳೇ. ಅಲ್ಲಿಗೆ ಬಂದವರಲ್ಲಿ ಅನೇಕರು ತಾವು ಕಳೆದುಕೊಂಡ ವಸ್ತುಗಳೂ, ಬಟ್ಟೆಗಳೂ, ಸೀರೆಗಳೂ ಅಲ್ಲಿರುವುದನ್ನು ನೋಡಿದರು. ಅವರವರ ವಸ್ತುಗಳನ್ನು ಅವರವರು ತೆಗೆದುಕೊಂಡರು. ಮೀನಾಕ್ಷಿ ತನ್ನ ಮನೆಯ ಪಾತ್ರಗಳನ್ನೂ, ಬಕ್ಕೀಟನ್ನೂ ತೆಗೆದುಕೊಂಡಳು. ಮುದುಕಿಯನ್ನೂ ಮೊಮ್ಮಗನನ್ನೂ ಗ್ರಾಮಾಧಿಕಾರಿ ತನ್ನ ವಿಚಾರಕ್ಕೆ ತೆಗೆದುಕೊಂಡನು. ಅವರನ್ನು ಹಿಡಿಯಲು ಸಹಾಯಮಾಡಿದ ಮೀನಾಕ್ಷೀ ಆನಂದರನ್ನು ಎಲ್ಲರೂ ಮೆಚ್ಚಿದರು.



# ವರಪರೀಕ್ಷೆ

ಅವಂತಿ ರಾಜಕುಮಾರಿ ತ್ರಿಲೋಕ ಸುಂದರಿ ಎಂದು ಖ್ಯಾತಳಾಗಿದ್ದಳು. ಅವಳಿಗೆ ತಕ್ಕ ವರನನ್ನು ನಿರ್ಣಯಿಸಲಿಕ್ಕಾಗಿ ಒಂದು ಪರೀಕ್ಷೆ ಇಟ್ಟರು. ಇದಕ್ಕೆ ಮೂರು ದೇಶಗಳ ಮೂವರು ರಾಜಕುಮಾರರಿಗೆ ಮಾತ್ರವೇ ಆಹ್ವಾನ ಕಳಿಸಲಾಗಿತ್ತು.

ಅವಂತೀ ರಾಜನು ಮೂವರು ರಾಜಕುಮಾರರನ್ನೂ ಅನೇಕ ನಾಯಿಗಳು ಕಟ್ಟಲ್ಪಟ್ಟ ಒಂದು ಕೊಟ್ಟಿಗೆಯ ಬಳಿಗೆ ಕರೆದುಕೊಂಡು ಹೋಗಿ " ಈ ನಾಯಿಗಳೆಲ್ಲಾ ವರಪರೀಕ್ಷೆಯಲ್ಲಿ ಸೋತುಹೋದ ರಾಜಕುಮಾರರು. ಪರೀಕ್ಷೆ ಏನೆಂದರೆ, ಪೂರ್ವ ದಿಕ್ಕಿನಲ್ಲಿರುವ ಗುಡ್ಡದ ಗುಹೆಯೊಳಗೆ ಪ್ರವೇಶಿಸಿ ಹಿಂದಿರುಗಿ ಬರಬೇಕು " ಎಂದನು.

ಈ ಮಾತು ಕೇಳಿದ ಕೂಡಲೇ ಮೂವರಲ್ಲಿ ಒಬ್ಬನು ತನ್ನ ಮನೆಗೆ ಹೋಗಿಬಿಟ್ಟನು. ಉಳಿದಿಬ್ಬರು ರಾಜಕುಮಾರರೂ ಗುಡ್ಡದ ಕಡೆಗೆ ಹೊರಟರು. ಅವರು ಗುಹೆಯನ್ನು ಸಮೀಪಿಸುವಾಗ ಗುಹೆಯೊಳಗಿನಿಂದ ನಾಯಿಯ ಬೊಗಳುವಿಕೆ ಕೇಳಿಸಿತು. ಕೂಡಲೇ ಇಬ್ಬರಲ್ಲಿ ಒಬ್ಬನು ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿ ತನ್ನ ದೇಶದ ದಾರಿ ಹಿಡಿದು ಹೊರಟೇ ಹೋದನು.

ಮೂರನೇ ರಾಜಕುಮಾರನು ಸಾಹಸದಿಂದ ಗುಹೆಯೊಳಗೆ ಪ್ರವೇಶಿಸಿದನು. ಅಲ್ಲಿದ್ದ ರಾಜಕುಮಾರಿ ಅವನನ್ನು ಸ್ವಾಗತಿಸಿ ಅವನ ಕೊರಳಿಗೆ ವರಮಾಲೆ ಹಾಕಿದಳು.





# ಪ್ರಾಮಾಣಿಕತೆ

ಹಿಂದೆ ಒಂದು ಊರಿನಲ್ಲಿ ಒಬ್ಬರು ಜಮೀನ್ದಾರರಿದ್ದರು. ಅವರ ಮನೆಯೊಳಗಿನ ಕೆಲಸಗಳನ್ನು ಮಾಡಲು ಕಿಟ್ಟಪ್ಪನೆಂಬವನು ಸೇರಿದ್ದನು. ಹಟ್ಟಿ ಕೊಟ್ಟಿಗೆ ತೋಟದ ಕೆಲಸಗಳನ್ನು ನೋಡಿಕೊಳ್ಳಲು ಚೆನ್ನಯ್ಯನೆಂಬವನಿದ್ದನು. ಇವರಿಬ್ಬರೂ ಎರಡು ಮೂರು ದಿನಗಳ ಹೆಚ್ಚು ಕಡಿಮೆಯಲ್ಲಿ ಬಂದವರಾದುದರಿಂದ ಹೊಸಬರೆಂದೇ ಆಯಿತು. ಅವರಿಬ್ಬರಿಗೂ ಒಬ್ಬರಿಗೊಬ್ಬರು ಹಿಡಿಸುತ್ತಿದ್ದಿಲ್ಲ. ಎರಡು ಕೆಲಸಗಳನ್ನೂ ತಾನೊಬ್ಬನೇ ಮಾಡಿದರೆ ಹೆಚ್ಚು ಸಂಬಳ ಸಿಗುತ್ತದೆಂದು ಇಬ್ಬರಿಗೂ ಆಶೆ.

ಒಂದು ದಿನ ಜಮೀನುದಾರರು ಕಿಟ್ಟಪ್ಪನನ್ನು ಹಿಂದಿಟ್ಟುಕೊಂಡು ತೋಟದಲ್ಲಿ ತಿರುಗಾಡುತ್ತಾ ಬಂದರು. ಆಗ ಚೆನ್ನಯ್ಯ ತೋಟದ ಮರಗಿಡಗಳಿಗೆ ನೀರು ಬಿಡುತ್ತಿದ್ದನು. ಜಮೀನುದಾರರು ಸ್ವಲ್ಪಹೊತ್ತು ಹಾಗೆ ಹೀಗೆ ತಿರುಗಾಡಿ ಮನೆಗೆ ಹೋದರು. ಕಿಟ್ಟಪ್ಪ ಕೂಡಾ ಅವರ ಹಿಂದೆಯೇ ಹೋದನು. ಜಮೀನುದಾರರು ನಿಂತು ಮುಂದುವರಿದ ಜಾಗದಲ್ಲಿ ಏನೋ ಹೊಳೆಯುತ್ತಿರುವುದು ಚೆನ್ನಯ್ಯನಿಗೆ ಕಂಡಿತು. ಕೂಡಲೇ ಅವನು ಅದನ್ನು ಎತ್ತಿಕೊಂಡನು. ಅದು ಜಮೀನುದಾರರ ಬೆರಳಿನಲ್ಲಿದ್ದ ವಜ್ರದುಂಗುರ.

"ಅವರಿಗೆ ಗೊತ್ತಾಗದೆ ಜಾರಿಬಿದ್ದಿದೆ! ಇದು ನನಗೆ ಸಿಕ್ಕಿದ್ದರಿಂದ ಸರಿಹೋಯಿತು. ಅವರ ಹಿಂದೆಯೇ ಇದ್ದ ಕಿಟ್ಟಪ್ಪನಿಗೆ ಸಿಕ್ಕಿದ್ದರೆ ಅಷ್ಟೇ, ಗುಳುಂಕರಿಸಿಬಿಡುತ್ತಿದ್ದ" ಎಂದುಕೊಂಡ ಚೆನ್ನಯ್ಯ.

ಅಷ್ಟರಲ್ಲಿ ಅವನಿಗೊಂದು ಆಲೋಚನೆ ಮಿಂಚಿತು. ಆ ಉಂಗುರವನ್ನು ತನ್ನ ಸೊಂಟದ ಬಟ್ಟೆಯೆಡೆಯಲ್ಲಿ ಸಿಗಿಸಿಕೊಂಡನು.

ರಾತ್ರಿಯಾಯಿತು. ಎಲ್ಲರೂ ಗಾಢನಿದ್ದೆಯಲ್ಲಿರುವಾಗ ಚೆನ್ನಯ್ಯ ಕಿಟ್ಟಪ್ಪ ಮಲಗಿದ್ದ ಕೋಣೆಯ ಹತ್ತಿರ ಬಂದನು. ಅವನಿಗೆ ಅನುಕೂಲವಾಗಿಯೇ ಕಿಟ್ಟಪ್ಪನ ಕೋಣೆಯ ಬಾಗಿಲು ವಾರೆಯಾಗಿ ಅರ್ಧ ತೆರೆದಿತ್ತು. ಚೆನ್ನಯ್ಯ ಒಳಗಡೆ ಹಣಿಕಿ ನೋಡಿದನು. ಕಿಟ್ಟಪ್ಪ ಇನ್ನೂ ಮಲಗಲಿಲ್ಲ; ಅವನು ತನ್ನ ಪೆಟ್ಟಿಗೆಯಲ್ಲಿ ಏನನ್ನೋ ಹುಡುಕುತ್ತಿದ್ದಾನೆ. ಕಡೆಗೆ ಕಿಟ್ಟಪ್ಪ ಪೆಟ್ಟಿಗೆಯೊಳಗಿನಿಂದ ಏನನ್ನೋ ತೆಗೆದು, ಮುಷ್ಟಿಯಲ್ಲಿ ಮುಚ್ಚಿಕೊಂಡು ಬಾಗಿಲ ಕಡೆಗೆ ಬರತೊಡಗಿದನು.

ವಿ. ಜಯರಾಂ

ಚೆನ್ನಯ್ಯ ಸದ್ದಿಲ್ಲದೆ ಬದಿಗೆ ತಪ್ಪಿಸಿಕೊಂಡನು. ಕಿಟ್ಟಪ್ಪ ಹೊರಗೆ ಹೋದ ಕೂಡಲೇ ಚೆನ್ನಯ್ಯ ಬೆಕ್ಕಿನಂತೆ ಒಳಗೆ ಹೊಕ್ಕು, ಉಂಗುರವನ್ನು ಕಿಟ್ಟಪ್ಪನ ಪೆಟ್ಟಿಗೆಯ ಅಡಿಯಲ್ಲಿಟ್ಟು, ಹೊರಗೆ ಬಂದನು.

ಆಗ ಅವನ ತಲೆಯೊಳಗೆ ಬೇರೆ ವಿಷಯದ ಆಲೋಚನೆ ಚಲಿಸತೊಡಗಿತು. ಇಷ್ಟು ರಾತ್ರಿಯ ಹೊತ್ತಿನಲ್ಲಿ ಕಿಟ್ಟಪ್ಪ ಎಲ್ಲಿಗೆ ಹೋಗುತ್ತಾನೆ? ಅವನ ಮುಷ್ಟಿಯೊಳಗೆ ಏನಿದ್ದೀತು? ಚೆನ್ನಯ್ಯ ಅತಿವೇಗ ವಾಗಿ ಕಿಟ್ಟಪ್ಪ ಹೋದ ಕಡೆಗೇ ಹೋದನು.

ಕಿಟ್ಟಪ್ಪ ತೋಟದೊಳಗೆ ಹೋಗಿ, ಕಾಲುವೆಯ ಬದಿಯಲ್ಲಿದ್ದ ದೊಡ್ಡದೊಂದು ಮರದ ಪೊಟರೆ ಯೊಳಗೆ ಏನನ್ನೋ ಅಡಗಿಸಿಟ್ಟನು. ಸಾಧಾರಣ ವಾಗಿ ಚೆನ್ನಯ್ಯ ದಿನಾ ಆ ಕಾಲುವೆಯಲ್ಲಿ ಸ್ನಾನ ಕ್ಕಿಳಿಯುವ ಮೊದಲು ತನ್ನ ಬಟ್ಟೆಗಳನ್ನು ಆ ಪೊಟರೆ ಯಲ್ಲಿ ಇಡುತ್ತಾನೆ. ಈಗ ಕಿಟ್ಟಪ್ಪ ಆ ಪೊಟರೆ ಯಲ್ಲಿ ಏನನ್ನು ಅಡಗಿಸಿಟ್ಟಿದ್ದಾನೋ ನೋಡ ಬೇಕೆಂದು ಚೆನ್ನಯ್ಯನಿಗೆ ತೋರಿತು. ಕಿಟ್ಟಪ್ಪ ಅಲ್ಲಿಂದ ಹಿಂದಿರುಗಿ ಹೊರಟುಹೋದ ಕೂಡಲೇ ಚೆನ್ನಯ್ಯ ಆ ಮರದ ಕಡೆಗೇ ನಡೆದನು. ಆಗ ಅವನ ತಲೆಯ ಮೇಲೆ ಬಲವಾದೊಂದು ಏಟು ಬಿತ್ತು. ಹಾ! ಎಂದು ಬೋದ ತಪ್ಪಿ ಬಿದ್ದುಬಿಟ್ಟ.

ಮತ್ತೆ ಎಚ್ಚರಿಕೆಯಾದಾಗ ಚೆನ್ನಯ್ಯ ತನ್ನ ಕೋಣೆ ಯಲ್ಲಿ ಬರಿ ನೆಲದಲ್ಲಿ ಬಿದ್ದುಕೊಂಡಿದ್ದ. ತನ್ನ ತಲೆಗೆ ಹೊಡೆದವನು ಆ ಕಿಟ್ಟಪ್ಪನೇ ಆಗಿರಬೇಕು. ಅವನು ತನ್ನನ್ನು ಗಮನಿಸಿ ಹಿಂದಿನಿಂದ ಬಂದು ಹೊಡೆದಿ ದ್ದಾನೆ. ಬೆಳಗಾದ ಮೇಲೆ ಅವನಿಗೆ ತಕ್ಕ ಬುದ್ಧಿ ಕಲಿಸ ದಿದ್ದರೆ ತಾನು ಚೆನ್ನಯ್ಯನೇ ಅಲ್ಲ ಎಂದುಕೊಂಡ ತಲೆಯಲ್ಲಿಯ ಬೊಕ್ಕೆಯನ್ನು ತಡವುತ್ತಾ.

ಬೆಳಗಾಗುವಾಗ ಅವನು ತನ್ನ ತಲೆಗೆ ಪೆಟ್ಟಾದವ ನಂತೆ ಕಾಣಿಸಿಕೊಳ್ಳಲಿಲ್ಲ. ಬೆಳಗಾಗಿ ಸ್ವಲ್ಪ ಹೊತ್ತಿನಲ್ಲಿ ಜಮೀನುದಾರರು, ಅವರಿಬ್ಬರನ್ನೂ ತನ್ನ ಬಳಿಗೆ



ಕರೆದು, "ಈ ಮನೆಯಲ್ಲಿ ನನ್ನ ಒಂದು ಕೈಯಲ್ಲಿದ್ದ ಚಿನ್ನದ ಕಡಗ ಕಾಣೆಯಾಗಿದೆ. ಅದನ್ನು ಕದಿಯುವ ಅವಕಾಶ ಈ ಮನೆಯಲ್ಲಿ ನಿಮ್ಮಿಬ್ಬರಿಗೇ ಇದೆ. ಸತ್ಯ ಹೇಳಿಬಿಡಿ. ನಿಮ್ಮಿಬ್ಬರಲ್ಲಿ ಯಾರು ಕದ್ದವರೆಂಬುದು ಗೊತ್ತಾಗದಿದ್ದರೆ ನಿಮ್ಮಿಬ್ಬರ ಚರ್ಮವನ್ನೂ ಸುಲಿಸಿ ಬಿಡುತ್ತೇನೆ." ಎಂದು ಗದರಿಸಿ ಹೇಳಿದರು.

ಜಮೀನುದಾರರು ಹೇಳಿದ ಮಾತು ಕೇಳಿ ಚೆನ್ನಯ್ಯನಿಗೆ ಆಶ್ಚರ್ಯವಾಯಿತು. ಬೆರಳಿನ ಉಂಗುರವನ್ನು ಕಳೆದುಕೊಂಡವರು, ಕೈಯಲ್ಲಿದ್ದ ಕಡಗ ಹೋಯಿತೆನ್ನುವರಲ್ಲ? ಅವನು ಆಲೋಚಿಸು ತ್ತಿರುವಾಗ ಕಿಟ್ಟಪ್ಪ ನಿಸ್ಸಂಕೋಚದಿಂದ, "ಅದನ್ನು ಕದ್ದವನು ಚೆನ್ನಯ್ಯಸ್ವಾಮಿ. ಅವನು ರಾತ್ರಿಯಲ್ಲಿ ತೋಟದಲ್ಲಿ ಏನನ್ನೋ ಅಡಗಿಸಿಡುವುದನ್ನು ನಾನು ಕಂಡಿದ್ದೇನೆ. ಏನೋ ಅಂದುಕೊಂಡೆ. ಬನ್ನಿ ತೋರಿಸು ತ್ತೇನೆ. ಎಂದು ಹೇಳಿ ಜಮೀನುದಾರರನ್ನು ಕರೆದು ಕೊಂಡು ತೋಟದ ಕಾಲುವೆಯ ಬದಿಯಲ್ಲಿದ್ದ

ಮರದ ಬಳಿಗೆ ಹೋದನು. ಆದರೆ ಕಿಟ್ಟಪ್ಪ ಮರದ ಪೊಟರೆಯೊಳಗೆ ಕೈಹಾಕಿ ಏನೂ ಸಿಕ್ಕದೆ, ಬೆಪ್ಪನ ಹಾಗೆ ತಡವರಿಸುತ್ತ, ತಾನು ಇಲ್ಲಿ ಅಡಗಿಸಿಟ್ಟಿದ್ದು ಎಲ್ಲಿ ಹೋಯಿತು? ಹೇಗೆ ಮಾಯವಾಯಿತು? ಎಂದುಕೊಂಡು ಮೇಲೆ ಕೆಳಗೆ ಆಚೆ ಈಚೆ ನೋಡ ತೊಡಗಿದನು. ಏನು ಮಾಡಬೇಕೆಂದು ಅವನಿಗೂ ಗೊತ್ತಾಗಲಿಲ್ಲ. ಕಿಟ್ಟಪ್ಪನ ಉಪಾಯ ಚೆನ್ನಯ್ಯನಿಗೆ ಅರ್ಥವಾಯಿತು. ತನ್ನ ಮೇಲೆ ಕಳ್ಳತನದ ಆರೋಪ ವನ್ನು ಹಾಕಲಿಕ್ಕಾಗಿ ಜಮೀನುದಾರರ ಕಡಗವನ್ನು ಕದ್ದು ಈ ಪೊಟರೆಯಲ್ಲಿ ಅಡಗಿಸಿಟ್ಟಿದ್ದಾನೆ ಕಳ್ಳ. ಆದರೆ ಬೇರೊಬ್ಬ ಯಾವ ಕಳ್ಳನೋ ತನ್ನ ತಲೆಗೆ ಹಿಂದಿನಿಂದ ಹೊಡೆದು ಆ ಕಡಗವನ್ನು ಕದ್ದುಕೊಂಡು ಹೋಗಿದ್ದಾನೆ!

ಚೆನ್ನಯ್ಯನಿಗೆ ಕಿಟ್ಟಪ್ಪನ ಮೇಲೆ ತುಂಬ ಸಿಟ್ಟು ಬಂತು. ಆಗ ಅವನು ಜಮೀನುದಾರರೊಂದಿಗೆ, "ಸ್ವಾಮಿ, ಕಡಗದ ಕಳ್ಳ ಯಾರೆಂಬುದು ನನಗೆ ಗೊತ್ತಿದೆ. ಅಸಲು ನಿಮಗೆ ಉಂಗುರದ ವಿಷಯ ಗೊತ್ತಾಗಿಲ್ಲವೆಂದು ಕಾಣುತ್ತದೆ. ಅವೆರಡನ್ನೂ ಕದ್ದವನು ಕಿಟ್ಟಪ್ಪನೇ. ಹೀಗೆ ಬನ್ನಿ ತೋರಿಸುತ್ತೇನೆ." ಎಂದು ಜಮೀನುದಾರರನ್ನು ಕಿಟ್ಟಪ್ಪನ ಕೋಣೆಗೆ ಕರೆದುಕೊಂಡು ಹೋಗಿ. ಅವನ ಪೆಟ್ಟಿಗೆಯನ್ನು ಕೌಚಿ ಹಾಕಿ ಹುಡುಕಿದನು. ಆದರೆ ಅದರಲ್ಲಿ ಉಂಗುರವಿರಲಿಲ್ಲ. "ನಾನು ಇದರಲ್ಲೇ ಇಟ್ಟ ಉಂಗುರ ಎಲ್ಲಿ ಹೋಯಿತು?" ಎಂದುಕೊಳ್ಳುತ್ತಾ ತತ್ತರಗುಟ್ಟುವ ಸರದಿ ಈಗ ಚೆನ್ನಯ್ಯನದಾಯಿತು.

ಆಗ ಜಮೀನುದಾರರು ನಗುತ್ತಾ, ಜೇಬಿನೊಳಗಿದ್ದ ತಮ್ಮ ಕೈಯನ್ನು ಹೊರಗೆ ತೆಗೆದು ತೋರಿಸುತ್ತ, "ನೋಡಿ, ಕಡಗವೂ ವಜ್ರದುಂಗುರವೂ ಇಲ್ಲೇ ಇವೆ!" ಎಂದರು. ಆಳುಗಳಿಬ್ಬರ ಮುಖವೂ ಕಂದಿತು.

"ನಿಮ್ಮಿಬ್ಬರ ಗುಣವನ್ನು ಪರೀಕ್ಷೆ ಮಾಡಬೇಕಂತ ನಾನೇ ಈ ನಾಟಕವಾಡಿಸಿದೆ. ನನ್ನ ಉಂಗುರವೂ ಕಡಗವೂ ಬೇರೆಬೇರೆಯಾಗಿ ನಿಮ್ಮಿಬ್ಬರ ಕಣ್ಣಿಗೂ ಬೀಳುವ ಹಾಗೆ ಮಾಡಿದೆ. ಅವುಗಳನ್ನು ನನಗೇ ತಂದುಕೊಡುವಿರೋ ಹೇಗೆ ನೋಡುವಾ ಅಂತ. ನೀವು ಅವುಗಳನ್ನು ಕದ್ದುಕೊಳ್ಳದಿದ್ದರೂ, ಅವುಗಳ ಸಹಾಯದಿಂದ ನೀವಿಬ್ಬರೂ ಒಬ್ಬರನ್ನೊಬ್ಬರು ಕಳ್ಳನನ್ನಾಗಿ ನಿರೂಪಿಸಿ ನನ್ನ ಮೇಲೆ ನಿಮ್ಮ ವಿಶ್ವಾಸ ಹೆಚ್ಚಿಗೆ ಇರುವ ಹಾಗೆ ತೋರಿಸಲು ಪ್ರಯತ್ನ ಪಟ್ಟಿರಿ. ನಿಮ್ಮಲ್ಲಿ ಕಳ್ಳಬುದ್ಧಿ ಇಲ್ಲದಿದ್ದರೂ ಅನ್ಯೋನ್ಯತೆಯ ಮರ್ಯಾದೆಯಿಲ್ಲ. ಇದು ಪ್ರಾಮಾಣಿಕತೆಯೂ ಅಲ್ಲ. ಇದರಿಂದ ನನಗೂ ಇಲ್ಲದ ತೊಂದರೆಗಳು ಬರುತ್ತವೆ. ಆದುದರಿಂದ ನೀವಿಬ್ಬರೂ ನಮ್ಮ ಮನೆಯ ಕೆಲಸ ಬಿಟ್ಟು ಹೋಗಿಬಿಡಿ" ಎಂದರು ಜಮೀನುದಾರರು.





# ಲೋಕಾನುಭವ

ಅನೇಕ ನೂರು ವರ್ಷಗಳ ಹಿಂದೆ ಒಂದು ಊರಿನಲ್ಲಿ ವಿದ್ಯಾನಾಥನೆಂಬ ಮಹಾಪಂಡಿತನು ಗುರುಕುಲವನ್ನು ನಡೆಯಿಸಿಕೊಂಡಿದ್ದನು. ಆತನ ಖ್ಯಾತಿ ದೂರದೂರದ ದೇಶಗಳಿಗೂ ಹರಡಿತ್ತು. ಅಂತೆಯೇ ದೂರ ಪ್ರಾಂತಗಳಿಂದಲೂ ವಿದ್ಯಾರ್ಥಿಗಳು ವಿದ್ಯಾನಾಥನ ಗುರುಕುಲಕ್ಕೆ ಬರುತ್ತಿದ್ದರು.

ವಿದ್ಯಾನಾಥನ ಮಗನಾದ ಬೃಹಸ್ಪತಿ ಕೂಡಾ ತಂದೆಯಂತೆಯೇ ವಿದ್ಯೆಗಳನ್ನು ಕಲಿತು, ಎಲ್ಲಾ ವಿಧದಲ್ಲಿಯೂ ತಂದೆಗೆ ಸರಿಸಮಾನ ಪಂಡಿತನೇ ಆದನು. ಅದನ್ನು ನೋಡಿ ತೃಪ್ತನಾದ ವಿದ್ಯಾನಾಥನು ಬೇಗದಲ್ಲೇ ತನ್ನ ಮಗನಿಗೆ ತನ್ನ ಸ್ಥಾನವನ್ನು ಬಿಟ್ಟುಕೊಡಬೇಕೆಂದು ಕೊಂಡು ಮಗನೊಂದಿಗೆ, "ಅಪ್ಪಾ, ನೀನು ಎಲ್ಲಾ ವಿದ್ಯೆಗಳಲ್ಲಿಯೂ ಪಾರಂಗತನಾಗಿರುವೆ. ಇನ್ನು ಲೋಕಜ್ಞಾನಗಳಿಸಬೇಕಾದುದೊಂದೇ ಉಳಿದಿದೆ. ಲೋಕವು ಹೇಗೆ ನಡೆಯುತ್ತಿದೆ. ಬೇರೆ ಬೇರೆ ಪ್ರಾಂತದಲ್ಲಿರುವವರು ಹೇಗೆ ಹೇಗೆ ಜೀವಿಸುತ್ತಾರೆ ಎಂಬುದನ್ನೆಲ್ಲಾ ತಿಳಿದುಕೊಂಡ ಹೊರತು, ನಿನ್ನ ಜ್ಞಾನವನ್ನು ವಿದ್ಯಾರ್ಥಿಗಳಿಗೆ ಉಪಯೋಗವಾಗುವಂತೆ ವಿನಿಯೋಗಿಸಲು ಆಗುವುದಿಲ್ಲ. ಆದುದರಿಂದ ಕೆಲವು ತಿಂಗಳು ದೇಶಾಟನೆ ಮಾಡಿಬಾರಪ್ಪ. ಎಲ್ಲೆಲ್ಲಿ ಏನೇನು ವಿಶೇಷಗಳಿವೆಯೋ ಚೆನ್ನಾಗಿ ಗುರುತಿಟ್ಟುಕೊಂಡು ಬಾ." ಎಂದನು.

ತಂದೆಯ ಅಭಿಪ್ರಾಯದಂತೆ ಬೃಹಸ್ಪತಿ ದೇಶಾಟನೆಗೆ ಹೊರಟು, ಗ್ರಾಮದಿಂದ ಗ್ರಾಮಕ್ಕೆ ತಿರುಗುತ್ತ, ಪ್ರಜೆಗಳ ವಾಸ್ತವ ಜೀವನವೆಂದರೆ ಎಂತಹುದೆಂಬುದನ್ನು ಅಭ್ಯಸಿಸುತ್ತ, ಪುಸ್ತಕಗಳಲ್ಲಿ ಓದದಿರುವ ಎಷ್ಟೋ ವಿಷಯಗಳನ್ನು ಮನಗಂಡನು. ಕಾಲ ದೇಶ ಹವಾಮಾನಗಳಿಗೆ ತಕ್ಕಂತೆ ಬೇರೆ ಬೇರೆ ಜನತೆಯ ರೀತಿ ನೀತಿಗಳನ್ನು ನೋಡಿದನು. ಕೆಲವು ಕಡೆಯಲ್ಲಿ ಆಶ್ಚರ್ಯವಾಗುವಂತಹ ವಿಚಿತ್ರ ಘಟನೆಗಳೂ ಅವನಿಗೆ ಇದಿರಾದವು.

ಒಂದು ಗ್ರಾಮದಲ್ಲಿ ದಷ್ಟಪುಷ್ಟರಾಗಿದ್ದ ವಸ್ತಾದುಗಳು ಒಬ್ಬ ಬಲಹೀನ ಮನುಷ್ಯನಿಗೆ ಪಾದಪೂಜೆ ಮಾಡುತ್ತ "ಮಹಾಬಲನಿಗೆ ಜಯ! ಜಯ!" ಎಂದು ನಿನಾದಿಸುತ್ತಿರುವುದನ್ನು ನೋಡಿದನು. ಈ ವಿಚಿತ್ರಕ್ಕೆ ಕಾರಣವೇನೆಂದು ವಿಚಾರಿಸಿದಾಗ, ಪೂರ್ವದಲ್ಲಿ ನಡೆದ ಈ ಕೆಳಗಿನ ಸಂಗತಿ ಗೊತ್ತಾಯಿತು: ಒಂದು ಕಾಲದಲ್ಲಿ ಆ ಗ್ರಾಮದಲ್ಲಿ ಮಹಾಬಲ

ನೆಂಬವನು ಇದ್ದನಂತೆ. ಅವನು ಗ್ರಾಮಕ್ಕೆ ಬಂದ ಅನೇಕ ವಿಪತ್ತುಗಳಿಂದ ಗ್ರಾಮಸ್ಥರನ್ನು ಕಾಪಾಡಿದ್ದಾನಂತೆ. ಸುತ್ತಮುತ್ತಲಿನ ಕಾಡುಗಳಿಂದ ಕ್ರೂರಮೃಗಗಳು ಬಂದು ಗ್ರಾಮದ ಮೇಲೆ ಬಿದ್ದರೆ ಆ ಮಹಾಬಲನು ಅವುಗಳನ್ನೆಲ್ಲ ಒಬ್ಬಂಟಿಗನಾಗಿ ಇದಿರಿಸಿ ಕೊಲ್ಲುತ್ತಿದ್ದನಂತೆ. ಒಂದು ಸಾರಿ ದುರ್ಮುಖನೆಂಬ ರಾಕ್ಷಸನು ಆ ಗ್ರಾಮವನ್ನು ಮಾತ್ರವಲ್ಲದೆ, ಸುತ್ತುಮುತ್ತಣ ಗ್ರಾಮಗಳನ್ನು ಕೂಡಾ ಪೀಡಿಸಲು ಶುರು ಮಾಡಿದಾಗ, ಮಹಾಬಲನು ಮಹಾಕಾಳಿಗೆ ಪೂಜೆ ಮಾಡಿ, ದೇವಿಯ ಅನುಗ್ರಹದಿಂದ ಅಮಾನುಷ ಶಕ್ತಿಗಳನ್ನು ಹೊಂದಿ ದುರ್ಮುಖನೊಂದಿಗೆ ಘೋರ ಯುದ್ಧಮಾಡಿ ಕಡೆಗೆ ಅವನನ್ನು ಕೊಂದನಂತೆ. ಅಂದಿನಿಂದ ಆ ಪ್ರಾಂತಗಳ ಊರಿನವರಿಗೆಲ್ಲಾ ಮಹಾಬಲನ ಮೇಲೆ ಅಪಾರವಾದ ಅಭಿಮಾನ ಏರ್ಪಟ್ಟಿತ್ತು. ಮುಖ್ಯವಾಗಿ ಬಲಶಾಲಿಗಳಿಗೆ ಅವನೇ ಆರಾಧನೆಯ ದೈವ. ಊರವರು ದುರ್ಮುಖನ ಮರಣ ದಿನವನ್ನು ಪರ್ವದಿನವನ್ನಾಗಿ ಆಚರಿಸುತ್ತ, ಆ ದಿನ ಮಹಾಬಲನಿಗೆ ಪಾದಪೂಜೆ ಮಾಡುವ ಪರಿಪಾಠವಿಟ್ಟಿದ್ದರು. ಮಹಾಬಲನು ಸತ್ತುಹೋಗಿ ಕೆಲವು ನೂರು ವರ್ಷಗಳಾಗಿದ್ದುವು. ಆದರೂ ಆ ದಿನ ಮಹಾಬಲನ ಸಂತತಿಯವನಿಗೆ ಅವನು ಎಂಥವನಾಗಿದ್ದರೂ ಪಾದಪೂಜೆ ಮಾಡುವುದನ್ನು ಬಿಡಲಿಲ್ಲ.

ಪೂರ್ವಿಕರ ಮಹತ್ವವನ್ನನುಸರಿಸಿ ಮಾನವರನ್ನು ಆರಾಧಿಸುವ ಪದ್ಧತಿಗಳು ಇನ್ನೂ ಅನೇಕ ಸಂದರ್ಭಗಳಲ್ಲಿ ಬೃಹಸ್ಪತಿಗೆ ಕಂಡುಬಂದುವು. ಆದರೆ ಇಂತಹುದಕ್ಕೆ ವಿರುದ್ಧವಾದ ಸಂಘಟನೆಯನ್ನು ಕೂಡಾ ಅವನು ಮತ್ತೊಂದು ಗ್ರಾಮದಲ್ಲಿ ನೋಡಿ ಆಶ್ಚರ್ಯಪಡುವಂತಾಯಿತು.

ಆ ಊರಿನ ದೊಡ್ಡ ಮನುಷ್ಯನಾದ ವಿತಂಡನ ಮನೆಯಲ್ಲೇ ಬೃಹಸ್ಪತಿ ಉಳಿದುಕೊಂಡಿದ್ದ. ವಿದ್ಯಾನಾಥನ ಕೀರ್ತಿ ಬಹುದೂರದವರೆಗೂ ಹರಡಿದ್ದುದರಿಂದ, ಆತನ ಮಗನಾದ ಬೃಹಸ್ಪತಿಗೆ ಹೋದಲ್ಲೆಲ್ಲಾ ಗೌರವ ಲಭಿಸುತ್ತಿತ್ತು. ಹಾಗೆಯೇ ವಿತಂಡನು ಬೃಹಸ್ಪತಿಯೊಂದಿಗೆ, "ಮಹಾಶಯ, ಈ ದಿನ ನಮ್ಮ



ಗ್ರಾಮದ ಮಂಟಪದಲ್ಲಿ ಆಸ್ಥಾನ ಕವಿಯನ್ನು ಆರಿಸಿಕೊಳ್ಳುವ ಕೆಲಸ ನಡೆಯಲಿದೆ. ನಿಮ್ಮಂತಹ ಪಂಡಿತರ ಸಮಕ್ಷಮದಲ್ಲಿ ಅದು ನಡೆಯುವಂತಾಗುವುದಕ್ಕೆ ಎಲ್ಲರೂ ತುಂಬಾತೃಪ್ತರಾಗುತ್ತಾರೆ. ನೀವು ಕೂಡಾ ಅಲ್ಲಿಗೆ ಬರಬೇಕು" ಎಂದು ಆಹ್ವಾನಿಸಿದನು. ಬೃಹಸ್ಪತಿ ಆತನೊಂದಿಗೆ ಸಮಾರಂಭ ನಡೆಯುವ ಗ್ರಾಮ ಮಂಟಪಕ್ಕೆ ಹೋದನು.

ಆಸ್ಥಾನ ಕವಿಯ ಪದವಿಗಾಗಿ ಆರುಮಂದಿ ಕವಿಗಳು ಬಂದಿದ್ದರು. ಅವರಲ್ಲಿ ಇಬ್ಬರು ಆಶುಕವಿತ್ವ ಹೇಳಬಲ್ಲರು. ಅವರಲ್ಲಿ ಒಬ್ಬನು ತಾನು ರಚಿಸಿದ ಮೂರು ಕಾವ್ಯಗಳನ್ನು ತನ್ನೊಂದಿಗೆ ತಂದಿದ್ದನು. ಆ ಕವಿಯನ್ನು ನೋಡಿ ವಿತಂಡನು ಆಶ್ಚರ್ಯದಿಂದ "ನೀನು ಅಂಬರನಲ್ಲವೇ ?" ಎಂದು ಕೇಳಿದ. ಆವನು ಹೌದೆಂದು ತಲೆಯಾಡಿಸಿದನು.

"ಅಂಬರನಾದರೆ ಆಸ್ಥಾನಕವಿ ಪದವಿಗೆ ಕಡೇ ಪಕ್ಷ ಐದು ಕಾವ್ಯಗಳನ್ನಾದರೂ ಬರೆದಿರಬೇಕು" ಎಂದು ಹೇಳಿ ವಿತಂಡನು ಅಂಬರನನ್ನು ಆರಿಕೆಗೆ ಸೇರಿಸದೆ, ಎರಡನೆಯ ಆಶುಕವಿಯನ್ನೇ ಆಸ್ಥಾನ ಕವಿಯೆಂದು ನಿರ್ಣಯಿಸಿದನು. ಅಂಬರನನ್ನು ಯಾರೂ ಲಕ್ಷ್ಯಮಾಡಿದಂತೆಯೂ ಕಾಣಲಿಲ್ಲ.

ಈ ವಿಚಿತ್ರವಾದ ಆರಿಕೆಯ ಕ್ರಮವನ್ನು ನೋಡಿ ಬೃಹಸ್ಪತಿ ಆಶ್ಚರ್ಯಪಟ್ಟು ವಿತಂಡನನ್ನು ನೋಡಿ, "ಅಂಬರನೆಂಬ ಹೆಸರಿನಲ್ಲಿ ಅದೇನು ವಿಶೇಷವಿದೆ ? ಅವನು ಮಾಡಿದ ತಪ್ಪು ಯಾವುದೋ ?" ಎಂದು ಕೇಳಿದನು. ಆಗ ಅಂಬರನನ್ನು ಕುರಿತು ತಿಳಿದು ಬಂಧ ವಿವರವೇನಂದರೆ:

ಅಂಬರ ಎಂಬುದು ಮನುಷ್ಯನ ಹೆಸರಲ್ಲ, ಜಾತಿಯ ಹೆಸರು. ತಾವು ಆಕಾಶದಿಂದ ಕಳಚಿ ಭೂಮಿಗೆ ಬಿದ್ದವರೆಂದುಕೊಂಡು ಅವರು ತಮ್ಮ ಜಾತಿಗೆ ಆ ಹೆಸರು ಇಟ್ಟುಕೊಂಡಿದ್ದಾರೆ. ಓದು ಬರೆಹ ಕಲಿತು ಪಂಡಿತರಾಗುವ ಅರ್ಹತೆ ತಮಗೆ ಮಾತ್ರ ಇದೆಯೆಂದು ಅವರು ಹೇಳುತ್ತಾರೆ. ಉಳಿದವರೆಲ್ಲ ಕಾಯಕಷ್ಟಮಾಡಿ ಬದುಕಬೇಕಂತೆ. ಅವರು ರಾಜರ ಬೆಂಬಲವನ್ನು ಸಂಪಾದಿಸಿ, ತಮ್ಮ ಜಾತಿಯ



ವರನ್ನು ಉಳಿದವರೆಲ್ಲ ಪೂಜಿಸಬೇಕೆಂದು ಹೇಳುತ್ತಾರೆ. ಕೆಲವು ಜಾತಿಯ ವರು ಅವರ ದೃಷ್ಟಿಯಲ್ಲಿ ಅಸ್ಪೃಶ್ಯರು. ಇವರಿಂದ ಪ್ರಜೆಗಳು ತುಂಬಾ ಹಿಂಸೆ ಅನುಭವಿಸಿದ್ದಾರೆ. ಆಮೇಲೆ ರಾಜ್ಯದಲ್ಲಿ ಎಷ್ಟೋ ಬದಲಾವಣೆಗಳು ಬಂದುವು. ಪ್ರಜಾಪ್ರಭುತ್ವ ಏರ್ಪಟ್ಟಿತು. ಆಗಿನಿಂದ ಅಂಬರರ ಮೇಲೆ ಅನೇಕ ಆರೋಪಗಳನ್ನು ಹೇರಲಾಯಿತು. ಅವರೂ ಪಶ್ಚಾತ್ತಾಪಪಟ್ಟರು.

ಈಗಿನ ಅಂಬರರಲ್ಲಿ ಅಹಂಕಾರವೇನೂ ಇಲ್ಲ. ಆದರೆ ಅವರ ಪೂರ್ವಿಕರು ಮಾಡಿದ ತಪ್ಪಿನಿಂದಾಗಿ ಅಂಬರರು ಬಹಳ ಕಾಲ ಕಷ್ಟಪಡಬೇಕಾಗಿ ಬಂದಿದೆ. ಅಂತಹುದರಲ್ಲಿ ಇದೂ ಒಂದು.

ಹೀಗೆ ಬೃಹಸ್ಪತಿ ಒಂದು ವರ್ಷದವರೆಗೆ ದೇಶಾಟನೆ ಮಾಡಿ ಲೋಕಜ್ಞಾನ ಸಂಪಾದಿಸಿ, ಮನೆಗೆ ಹಿಂದಿರುಗಿ ತನ್ನ ಅನುಭವಗಳನ್ನು ಹೇಳಿ ತಂದೆಯನ್ನು ತೃಪ್ತಿಪಡಿಸಿದನು. ಆಮೇಲೆ ತಂದೆ ನಡೆಸುವ ಗುರುಕುಲಕ್ಕೆ ಅವನೇ ಅಧಿಪತಿಯೂ ಆದನು.

ಒಂದು ದಿನ ಅವನು ಶಿಷ್ಯರಿಗೆ "ಅಳಿಲ ಸೇವೆ" ಯನ್ನು ಕುರಿತು ಪಾಠ ಹೇಳುತ್ತ, "ರಾಮನು ಸಮುದ್ರಕ್ಕೆ ಸೇತುವೆ ಕಟ್ಟುವಾಗ ಅಳಿಲು ಮಾಡಿದ ಸಹಾಯಕ್ಕೆ ಮೆಚ್ಚಿಕೊಂಡು ಅದರ ಬೆನ್ನನ್ನು ಪ್ರೀತಿಯಿಂದ ತಡವಿದನು. ಆ ಗುರುತುಗಳು ಈಗಲೂ ಅಳಿಲಿನ ಬೆನ್ನಿನಲ್ಲಿ ಉಳಿದಿವೆ" ಎಂದನು.

ಈ ಕಥೆಯನ್ನು ಅವನು ಶಿಷ್ಯರಿಗೆ ಹೇಳಿ ಮುಗಿಸಲು, ಒಬ್ಬ ಶಿಷ್ಯನು ಅದಕ್ಕೆ ಆಕ್ಷೇಪಣೆ ಹೇಳುತ್ತ, "ಪ್ರಾಣಿಗಳಿಗಿರುವ, ಸಹಜ ಲಕ್ಷಣಗಳು ಮಾತ್ರ ಸಂಕ್ರಮಿಸಿಕೊಂಡು ಬರುತ್ತವೆಯೇ ಹೊರತು ಕೃತ್ರಿಮವಾಗಿ ಏರ್ಪಟ್ಟ ಲಕ್ಷಣಗಳು ಹೇಗೆ ಸಂಕ್ರಮಿಸುತ್ತವೆ ಗುರುಗಳೇ? ನನ್ನ ತಂದೆಗೆ ಚಿಕ್ಕಪ್ರಾಯದಲ್ಲಿ ಹಣೆಯಲ್ಲಿ ಗಾಯವಾಗಿ ಒಣಗಿದ ಮೇಲೆ ಕಪ್ಪಗಿನ ಮಚ್ಚೆಮಾತ್ರ ಉಳಿದಿತ್ತು. ಆ ಮಚ್ಚೆ ನಮಗಾರಿಗೂ ಇಲ್ಲವಲ್ಲ? ಆದುದರಿಂದ ಈ ಕಥೆಯನ್ನು ನಾವು ಹೇಗೆ ನಂಬುವುದು?" ಎಂದನು.

ಬೃಹಸ್ಪತಿ ಅವನ ಮಾತಿಗೆ ನಗುತ್ತಾ, "ನಾನು ಹೇಳಿದ ಕಥೆಯು ನೀತಿ ಅದಲ್ಲ. ಅಳಿಲಿನ ಬೆನ್ನ ಗೆರೆಗಳು ಮೇಲೆ ಎದ್ದು ಕಾಣುತ್ತವಷ್ಟೆ? ಆದರೆ ಮಾನವಜಾತಿಯಲ್ಲಿ ಒಂದು ಜಾತಿಯವರು ಮಾಡಿದ ತಪ್ಪು ಅಥವಾ ಒಪ್ಪುಗಳು ಆ ಜಾತಿಯ ಮೇಲೆ ಶಾಶ್ವತವಾಗಿರುವಂತೆ ಅದೃಶ್ಯವಾದ ಮುದ್ರೆಯೊತ್ತಿಬಿಡುತ್ತದೆ" ಎಂದು. ಹಿಂದೆ ದೇಶಾಟನದ ಕಾಲದಲ್ಲಿ ತಾನು ಪ್ರತ್ಯಕ್ಷವಾಗಿ ನೋಡಿದ ಮಹಾಬಲನ ಪಾದಪೂಜೆಯನ್ನು ಕುರಿತೂ, ಅಂಬರನ ಕಥೆಯನ್ನು ಕುರಿತೂ ಹೇಳಿದನು. ಅಷ್ಟು ಕೇಳಿದ ಮೇಲೆ ಪ್ರಶ್ನೆ ಕೇಳಿದ ಶಿಷ್ಯನಿಗೂ ಇತರರಿಗೂ ತೃಪ್ತಿಯಾಯಿತು.



# ಅಸೂಯೆ

ಒಂದು ಊರಿನಲ್ಲಿ ರಾಮ ಮತ್ತು ರಂಗ ಎಂಬ ಇಬ್ಬರಲ್ಲಿ ರಂಗನು ತೀರ ಬಡವ. ಆದರೆ ರಾಮನು ಕೊಬ್ಬಿದ ದೊಡ್ಡ ರೈತನಾಗಿದ್ದ.

ಒಂದು ಸಾರಿ ರಂಗನು ತನ್ನ ತೋಟದಲ್ಲಿ ಕೇನೆಯನ್ನು ಬೆಳೆಯಿಸಿದನು. ಆ ವರ್ಷ ಅವನ ತೋಟದ ಹೊಸ ಮಣ್ಣಿನ ಮಹಿಮೆಯೋ ಎಂಬಂತೆ ಆನೆಯಷ್ಟು ದೊಡ್ಡ ಕೇನೆಯಾಯಿತು. ರಂಗನು ಅಂತಹ ವಿಶೇಷಾಕೃತಿಯ ಫಲವನ್ನು ಎತ್ತಿಕೊಂಡು ಹೋಗಿ ರಾಜನಿಗೆ ಕಾಣಿಕೆಯಾಗಿ ಕೊಟ್ಟುಬಿಟ್ಟನು.

ಆ ದೊಡ್ಡ ಕೇನೆಯನ್ನು ನೋಡಿ ರಾಜನು ಆಶ್ಚರ್ಯಪಟ್ಟು ರಂಗನನ್ನು ಮೆಚ್ಚಿ ಒಂದು ಚೀಲ ತುಂಬಾ ಧನವನ್ನು ಕೊಟ್ಟು ಸನ್ಮಾನಿಸಿ ಕಳುಹಿಸಿಕೊಟ್ಟನು.

ಈ ಸಂಗತಿ ದೊಡ್ಡ ರೈತ ರಾಮನಿಗೆ ಗೊತ್ತಾಯಿತು. ಆನೆಯಂತಹ ಕೇನೆಗೇ ಅಷ್ಟು ಧನಕೊಟ್ಟ ರಾಜನಿಗೆ ಒಂದು ಆನೆಯನ್ನೇ ಬಹುಮಾನವಾಗಿ ಕೊಟ್ಟರೆ ಎಷ್ಟು ಧನ ಸಿಗುವುದೋ ಎಂಬ ಆಸೆಯಿಂದ, ರಾಮನು ಒಂದು ಆನೆಯನ್ನು ಕೊಂಡುಕೊಂಡು ಹೋಗಿ ರಾಜನಿಗೆ ಕಾಣಿಕೆ ಕೊಟ್ಟನು.

" ಇವನಿಗೆ ಏನು ಬಹುಮಾನ ಕೊಡೋಣ ? ". ಎಂದು ರಾಜನು ಮಂತ್ರಿಯನ್ನು ಕೇಳಿದನು.

" ಆನೆಯನ್ನು ಕಾಣಿಕೆ ಕೊಟ್ಟವನಿಗೆ ಹಣದ ಅಗತ್ಯವಿರಲಿಕ್ಕಿಲ್ಲ. ಆನೆಯಂತಹ ಕೇನೆಯನ್ನೇ ಕೊಟ್ಟು ಬಿಡೋಣ " ಎಂದ ಮಂತ್ರಿ.

ರಾಜನು ರಂಗನ ಕೇನೆಯನ್ನು ರಾಮನಿಗೇ ಬಹುಮಾನವಾಗಿ ಕೊಟ್ಟನು.





# ನಿದ್ದೆಯ ಮುತ್ತು

ಒಂದು ಊರಿನಲ್ಲಿ ವ್ಯವಸಾಯಗಾರನಾದ ಗೋಪಣ್ಣನಿಗೆ ಬಹಳ ಕಾಲದವರೆಗೆ ಮಕ್ಕಳಿಲ್ಲದೆ, ಕಡೆಗೆ ಒಬ್ಬ ಮಗ ಹುಟ್ಟಿದ. ಸೋಮವಾರ ದಿನ ಹುಟ್ಟಿದ ಆ ಮಗನಿಗೆ ಸೋಮಪ್ಪನೆಂದು ಹೆಸರಿಟ್ಟು, ಬೆಳೆಯಿಸಿದನು. ಸೋಮಪ್ಪ ತಂದೆಗೆ ತುಂಬಾ ಸಹಾಯ ಮಾಡುತ್ತ ಬಂದನು.

ಆದರೆ ಒಂದು ವಿಷಯದಲ್ಲಿ ಮಾತ್ರ ಸೋಮಪ್ಪ ಜಡಸೋಮಾರಿಯಾಗಿದ್ದ. ಅವನು ಬೆಳಗಾಗಿ ಒಂದು ಜಾವ ಹೊತ್ತೇರಿದ ಹೊರತು ಹಾಸಿಗೆ ಬಿಟ್ಟು ಏಳುವುದಿಲ್ಲ. ತಾಯಿ ಎಷ್ಟು ಕರೆದರೂ ಮತ್ತೆ ಮತ್ತೆ ಮಲಗಿಬಿಡುವನು. ಅಂತೂ ಒಮ್ಮೆ ಎದ್ದು ಬಿಟ್ಟನೆಂದರೆ ಚುರುಕಾಗಿರುತ್ತಾನೆ.

ತನ್ನ ಮಗನು ಕೆಲಸ ಕಾರ್ಯಗಳಲ್ಲಿ ಗಟ್ಟಿಗನಾಗಿರುವುದನ್ನು ನೋಡಿ ಗೋಪಣ್ಣನಿಗೆ ಸಂತೋಷವಾಗುತ್ತಿದ್ದರೂ, ಬೆಳಗ್ಗೆ ಏಳದೆ ಬಿದ್ದುಕೊಂಡಿರುವವನನ್ನು ಯಾರು ತಾನೇ ಕೆಲಸಕ್ಕಿಟ್ಟುಕೊಂಡಾರು ? ಇನ್ನೊಬ್ಬರ ಹೊಲದಲ್ಲಿ ಕೆಲಸ ಮಾಡಲು ಬೆಳಿಗ್ಗೆ ಎದ್ದು ಹೋಗಬೇಕಷ್ಟೆ ? ಹೀಗಿರಲು ತನ್ನ ತರುವಾಯ ಸೋಮಪ್ಪನ ಗತಿ ಏನಾದೀತು ? ಈ ಭಯದಿಂದ ಗೋಪಣ್ಣ ಮಗನಿಗೆ ಬೆಳಂಜಾವದಲ್ಲಿ ಏಳುವ ಅಭ್ಯಾಸ ಮಾಡಿಸಲು ತುಂಬಾ ಪ್ರಯತ್ನಪಟ್ಟು ಸೋತನು.

ಬರುಬರುತ್ತ ಗೋಪಣ್ಣನಿಗೆ ಇದೊಂದು ದೊಡ್ಡ ಸಮಸ್ಯೆಯಾಗಿ ಕುಳಿತಿತು. ತನ್ನ ಅನಂತರ ಮಗನು ಕಷ್ಟಪಡದಿರಲು ಸಾಕಷ್ಟು ಹಣ ಉಳಿಸಬೇಕೆಂದರೆ, ಸಂಪಾದಿಸುವುದೆಲ್ಲಾ ನಿತ್ಯಖರ್ಚಿಗೇ ಸರಿಹೋಗುತ್ತಿದ್ದುವು. ತಾನು ಬದುಕಿರುವವರೆಗೆ ಅವನಿಗೇನೂ ಕೊರತೆಯಾಗುವುದಿಲ್ಲ ನಿಜ. ತಾನು ಹೋದ ಮೇಲೆ ಎಲ್ಲಾ ಭಾರ ಅವನ ಮೇಲೆಯೇ ಬೀಳುತ್ತೆ. ಎಲ್ಲದಕ್ಕೂ ಮೂಲಾಧಾರವಾಗಿ ಅವನು ಬೆಳಿಗ್ಗೆ ಬೇಗನೇ ಎದ್ದುಬಿಡಬೇಕು. ಬೆಳಿಗ್ಗೆ ಜಡನಾಗಿದ್ದವನು ಆಮೇಲೆ ಎಷ್ಟು ಮಾಡಿದರೂ ಅಷ್ಟಕ್ಕಷ್ಟೇ. ಗೋಪಣ್ಣ ತನ್ನ ಕಳವಳವನ್ನು ಕುರಿತು ಊರೊಳಗಿರುವ ತನ್ನ ಬಾವನೊಂದಿಗೆ ಹೇಳಿಕೊಂಡನು.

ಹೀಗಿರುವಾಗ ಗೋಪಣ್ಣ ಒಂದು ಅಗತ್ಯ ಕೆಲಸಕ್ಕಾಗಿ ಹೆಂಡತಿಯೊಂದಿಗೆ ಏಳೆಂಟು ದಿನಗಳವರೆಗೆ ಬೇರೆ ಊರಿಗೆ ಹೋಗಬೇಕಾಯಿತು. ಆಗ ಸೋಮಪ್ಪನನ್ನು ತನ್ನ ಮನೆಯಲ್ಲಿ ಬಿಡುವಂತೆ ಆ

ಎಸ್. ಜೆ. ಮೋಹನರಾವ್

ಬಾವಯ್ಯ ಹೇಳಿದ. ಹಾಗೆಯೇ ಸೋಮಪ್ಪನನ್ನು ಆ ಬಾವಯ್ಯನ ಮನೆಯಲ್ಲಿ ಬಿಟ್ಟು, ಗೋಪಣ್ಣ ಯಾವುದೋ ಊರಿಗೆ ಹೊರಟುಹೋದನು.

ಸೋಮಪ್ಪನಿಗೆ ಸೋದರ ಮಾವನ ಮನೆಯಲ್ಲಿ ಏನೂ ಕಷ್ಟವಾಗಲಿಲ್ಲ. ಮೂರನೇ ದಿನ ಬೆಳಂಜಾವ ದಲ್ಲಿ ಆ ಮನೆಯಲ್ಲಿ ಒಂದು ಕಳ್ಳತನವಾಯಿತು. ಆ ದಿನ ಬೆಳಂಜಾವದಲ್ಲೇ ಸೋಮಪ್ಪನ ಮಾವನೂ ಅತ್ತೆಯೂ ಹೊಲದ ಕಡೆಗೆ ಹೊರಟುಹೋಗಿದ್ದರು, ಸೋಮಪ್ಪನೊಬ್ಬನೇ ಮನೆಯಲ್ಲಿದ್ದವನು.

"ಚೆನ್ನಾಗಿ ಬೆಳಗಾದ ಮೇಲೆ, ನೀನು ಮನೆ ಯಲ್ಲಿರುವಾಗ ನಿನಗೆ ತಿಳಿಯದಂತೆ ಕಳ್ಳತನ ಹೇಗಾ ದೀತು? ನೀನೇ ಕಳ್ಳತನ ಮಾಡಿದವನು!" ಎಂದು ಸೋದರ ಮಾವ ಸೋಮಪ್ಪನ ಮೇಲೆ ಅಪರಾಧ ಹೇರಿ ಹಾಕಿಬಿಟ್ಟ. ಸುತ್ತುಮುತ್ತಲಿನವರು ಕೂಡಾ ಸೋಮಪ್ಪ ಕಳ್ಳತನ ಮಾಡಿರಬಹುದೆಂದೇ ಅಭಿ ಪ್ರಾಯಪಟ್ಟರು. ತನಗೇನೂ ಗೊತ್ತಿಲ್ಲವೆಂದೂ, ತಾನು ನಿದ್ದೆಯಲ್ಲಿದ್ದೆನೆಂದೂ ಸೋಮಪ್ಪ ಹೇಳಿದರೂ ಅವರಾರೂ ನಂಬಲಿಲ್ಲ. ಮೈ ಕೈ ಬಗ್ಗಿಸಿ ಕೆಲಸ ಮಾಡುವವರು ಅಷ್ಟು ಹೊತ್ತು ಬಿಸಿಲೇರಿದಾಗಲೂ ಮಲಗಿದ್ದನೆಂದರೆ ಯಾರೂ ನಂಬಲಿಲ್ಲ.

ಹೀಗೆ ಸೋದರ ಮಾವನ ಮನೆಯಲ್ಲಿ ಕಳ್ಳನೆಂಬ ಹೆಸರುಪಡೆದು, ಚಿಂತೆಪಡುತ್ತ ಸೋಮಪ್ಪ ತಂದೆಯ ದಾರಿಯನ್ನು ಕಾಯತೊಡಗಿದನು. ಗೋಪಣ್ಣ ಹಿಂದಿರುಗಿ ಬಂದು, ಬಾವಯ್ಯ ತನ್ನ ಮಗನ ಮೇಲೆ ಕಳ್ಳತನದ ಆರೋಪ ಹಾಕಿದುದನ್ನು ನೋಡಿ ಕೋಪಗೊಂಡು, "ಅವನು ಅಂಥವನಲ್ಲವೇ ಅಲ್ಲ" ಎಂದು ಹೇಳಿ ಮಗನನ್ನು ಮನೆಗೆ ಕರೆದುಕೊಂಡು ಹೋದನು. ಗೋಪಣ್ಣ ಹೇಳಿದುದಕ್ಕೆ ಬಾವಯ್ಯ ಉತ್ತರವನ್ನೇನೂ ಹೇಳಲಿಲ್ಲ.

ಆದರೆ ಮರುದಿನ ಬೆಳಿಗ್ಗೆ ಗೋಪಣ್ಣ ನಿದ್ದೆ ಯಿಂದೇಳುವಾಗ ಸೋಮಪ್ಪನೂ ಆಗಲೇ ಎದ್ದು ಬಿಟ್ಟಿದ್ದ. ಗೋಪಣ್ಣನಿಗೆ ಮೊದಲು ಆಶ್ಚರ್ಯ ವಾಯಿತು, ಆಮೇಲೆ ತನ್ನ ಬಾವಯ್ಯ ಮಾಡಿದ ಉಪಾಯವೆಂದು ಗ್ರಹಿಸಿ ಮೆಚ್ಚುಗೆ ತಂದು ಕೊಂಡನು. ತಾನು ಎಷ್ಟು ಪ್ರಯತ್ನಿಸಿದರೂ ಸೋಮಪ್ಪನ ನಿದ್ದೆ ಮತ್ತು ಇಳಿಸಲಾಗಲಿಲ್ಲ. ಅದನ್ನು ಆ ಬಾವಯ್ಯ ಎಂಥ ಉಪಾಯದಿಂದ ಇಳಿಸಿಬಿಟ್ಟ! ಕೂಡಲೇ ಗೋಪಣ್ಣ ತನ್ನ ಬಾವಯ್ಯ ನಿಗೆ ಕೃತಜ್ಞತೆ ಹೇಳಲು ಅಲ್ಲಿಗೆ ಹೋದನು. ಬಾವಯ್ಯ ನಗುತ್ತ, "ಹೌದು ಗೋಪಣ್ಣ ಬಾವಾ, ಇಷ್ಟು ಚಿಕ್ಕ ವಿಷಯಕ್ಕೆ ಎಷ್ಟೆಲ್ಲ ಮಾಡಬೇಕಾ ಯಿತು! ಕಳ್ಳ ಅಂದರೆ ಮನಸ್ಸಿಗೆ ಚೆನ್ನಾಗಿ ನಾಟುತ್ತ ದಷ್ಟೆ? ಅದಕ್ಕೇ ಗಿಡವಾಗಿರುವಾಗಲೇ ಬಗ್ಗಿಸಬೇಕು ಅನ್ನುವುದು" ಎಂದನು.





# ಗಿಳಿಪಾಠ

ಒಂದು ಊರಿನಲ್ಲಿ ಒಬ್ಬಳು ಮುದುಕಿಯಿದ್ದಳು. ಅವಳಿಗೆ ಸ್ವಲ್ಪ ಆಸ್ತಿಪಾಸ್ತಿಗಳಿದ್ದುವು. ಆದುದರಿಂದ ಯಾವ ಚಿಂತೆಯೂ ಇಲ್ಲದೆ ಸುಖವಾಗಿದ್ದಳು. ಅವಳಿಗೊಬ್ಬಳು ಮೊಮ್ಮಗಳ ಹೊರತು ಬೇರೆ ಯಾರೂ ಇರಲಿಲ್ಲ. ಮುದುಕಿ ತನ್ನ ಮೊಮ್ಮಗಳನ್ನು ಹೆದರಿಸಿ ಕಟ್ಟುಪಾಡಿನಲ್ಲಿಟ್ಟು ಅವಳಲ್ಲಿ ತುಂಬಾ ಭಯಭಕ್ತಿ ಉಂಟಾಗುವಂತೆ ಮಾಡಿಕೊಂಡಿದ್ದಳು. ಆ ಹುಡುಗಿ ಹೊರಗೆ ಹೋಗಿ ತನ್ನ ಈಡು ಜೋಡಿನವರೊಂದಿಗೆ ಆಡಿಕೊಳ್ಳಲು ಬಿಡುತ್ತಿದ್ದಿಲ್ಲ. ಅವರೂ ಈ ಹುಡುಗಿಯೊಂದಿಗೆ ಆಡಲು ಬರಕೂಡದು.

ಆದುದರಿಂದ ಮೊಮ್ಮಗಳಿಗೆ ಆ ಮನೆಯೊಂದು ಬಂದೀಖಾನೆಯೇ ಆಗಿತ್ತು. ಮನೆಯಲ್ಲಿ ಅಜ್ಜಿಯೂ ಒಂದು ಗಿಳಿಯೂ ಹೊರತು ಬೇರೆ ಯಾರೂ ಜತೆಗಾರರಿಲ್ಲ. ತನ್ನ ಈಡಿನವರೆಲ್ಲ ಹಾಯಾಗಿ ಸ್ವೇಚ್ಛೆಯಿಂದ ತಿರುಗುತ್ತಾ, ಆಡುತ್ತಾ, ಕೂಗುತ್ತಾ ಕುಣಿಯುತ್ತಾ ಇರುವುದನ್ನು ನೋಡುವಾಗಲೆಲ್ಲಾ ಆ ಮೊಮ್ಮಗಳಿಗೆ ಮುದುಕಿಯ ಮೇಲೆ ಕೋಪದ ಉರಿ ಏಳುತ್ತಿದ್ದಿತು. ಆದರೆ ಮುದುಕಿಯ ಮೇಲೆ ಭಯವೂ ತುಂಬಾ ಇರುವುದರಿಂದ ಬಾಯಿ ಬಿಡಲು ಹೆದರಿಕೆ. ಅಂತೆಯೇ ಬಾಯಿಯಲ್ಲಿ ನಾಲಗೆಯಿಲ್ಲದವಳಂತೆ ಮೂಕಿಯಾಗಿ ದುರುದುರು ನೋಡುತ್ತಾ ಸುಮ್ಮನಿರುವಳು. ಮುದುಕಿ ಮನೆಯಲ್ಲಿಲ್ಲದಿದ್ದಾಗ ಮಾತ್ರ "ಈ ಮುದುಕಿ ಸತ್ತರೆ ಒಳ್ಳೇದಿತ್ತು!" ಎಂದು ಬಾಯಿಬಿಟ್ಟು ಹೇಳಿಕೊಂಡು ತೃಪ್ತಳಾಗುತ್ತಿದ್ದಳು.

ಈ ಮಾತುಗಳನ್ನು ಕೇಳಿ ಕೇಳಿ ಗಿಳಿಯ ಬಾಯಿಗೆ ಅಂಟಿಕೊಂಡವು. ಒಂದು ದಿನ ಅದು ಮುದುಕಿ ಮನೆಯಲ್ಲಿದ್ದಾಗ "ಈ ಮುದುಕಿ ಸತ್ತರೆ ಒಳ್ಳೇದಿತ್ತು!" ಎಂದಿತು. ಗಿಳಿಯ ಬಾಯಿಯಿಂದ ಹೊರಟ ಮಾತು ಕೇಳಿ ಮುದುಕಿ ಬೆಚ್ಚಿಬಿದ್ದಳು. ಯಾವಾಗಲೂ ಪಂಜರದಲ್ಲೇ ಇರುವ ಈ ಗಿಳಿ ಇಂತಹ ಹಾಳು ಮಾತು ಹೇಗೆ ಕಲಿಯಿತೆಂದು ಅವಳಿಗೆ ಗೊತ್ತಾಗಲಿಲ್ಲ. ತನ್ನ ಮೊಮ್ಮಗಳು ಬರೀ ಪಾಪದವಳು. ಬಾಯಿಯಲ್ಲಿ ನಾಲಗೆಯೇ ಇಲ್ಲದವಳು. ತನ್ನ ಹೊರತು ಬೇರೆ ಗತಿಯಿಲ್ಲದ ಆ ಹುಡುಗಿ ಇಂಥ ಕೆಟ್ಟ ಮಾತುಗಳನ್ನು ಹೇಳುವುದುಂಟೆ?

ಒಂದು ದಿನ ಈ ಮುದುಕಿಯೊಂದಿಗೆ ಹರಟೆ ಹೊಡೆಯಲು ನೆರೆಮನೆಯ ಮುದುಕಮ್ಮನೊಬ್ಬಳು ಬಂದಳು. ಇಬ್ಬರೂ ಕುಳಿತುಕೊಂಡು ಅದೂ ಇದೂ

ಎ. ಫಣಿಕುಮಾರ

ಮಾತಾಡುತ್ತಿದ್ದ ಸಮಯದಲ್ಲಿ ಗಿಳಿ ಆಕಸ್ಮಾತ್ತಾಗಿ, "ಈ ಮುದುಕಿ ಸತ್ತರೆ ಒಳ್ಳೇದಿತ್ತು!" ಎಂದಿತು.

ಸ್ಪಷ್ಟವಾಗಿ ಕಿವಿಗೆ ಹೊಡೆದಂತೆ ಕೇಳಿಸಿದ ಗಿಳಿಯ ಮಾತು ಕೇಳಿ ಮಾತಾಡಿಕೊಂಡಿದ್ದ ನೆರೆಮನೆಯ ಮುದುಕಿ ಬೆಪ್ಪು ಬಡಿದವಳಂತಾದಳು. ಹೇಳುತ್ತಿದ್ದ ಮಾತನ್ನು ಪೂರ್ತಿ ಮಾಡದೆ ಏನೋ ಕೆಲಸವಿದ್ದವಳಂತೆ ಎದ್ದು ಹೋಗಿಬಿಟ್ಟಳು. ಆ ಮನೆಯ ಮುದುಕಿಗೆ ಮುಖಕ್ಕೆ ಕರಿ ಪೂಸಿದಂತಾಯಿತು.

ಹೇಗಾದರೂ ಈ ಬುದ್ಧಿಗೇಡಿ ಗಿಳಿಯಿಂದ ಇಂತಹ ಅವಾಚ್ಯಗಳನ್ನು ಹೇಳದಂತೆ ನಿಲ್ಲಿಸಬೇಕೆಂದು ಅವಳಿಗೆ ತೋರಿತು. ಸಮೀಪದಲ್ಲಿ ಪುರೋಹಿತರಾದ ಶಾಸ್ತ್ರಿಗಳೊಬ್ಬರು ಇದ್ದರು. ಅವರ ಮನೆಯಲ್ಲಿ ಕೂಡಾ ಒಂದು ಗಿಳಿ ಇದ್ದಿತು. ಆದುದರಿಂದ ಗಿಳಿಗಳ ಸಂಗತಿ ಅವರಿಗೆ ಚೆನ್ನಾಗಿ ಗೊತ್ತಿರಬಹುದೆಂದು ಮುದುಕಿಗೆ ತೋರಿತು.

ಅಂತೆಯೇ ಮುದುಕಿ ಆ ಶಾಸ್ತ್ರಿಗಳ ಬಳಿಗೆ ಹೋಗಿ "ಅಯ್ಯಾ, ನಮ್ಮ ಮನೆಯ ಹಾಳಾದ ಗಿಳಿ ಕೆಟ್ಟ ಮಾತುಗಳನ್ನು ಕಲಿತುಬಿಟ್ಟಿದೆ. ಯಾರಾದರೂ ಮನೆಗೆ ಬರಲಿಕ್ಕೇ ಹೆದರುತ್ತಾರೆ. ಅದಕ್ಕೆ ಕೆಟ್ಟ ಮಾತು ಬಿಟ್ಟುಹೋಗುವಂತಹ ಉಪಾಯವಿದ್ದರೆ ಹೇಳುವಿರಾ?" ಎಂದು ಕೇಳಿದಳು. "ಅಷ್ಟೇನಾ? ಅದೇನೂ ಕಷ್ಟವಾದ ಕೆಲಸ ಅಲ್ಲ ಬಿಡಿ. ನಮ್ಮ ಮನೆಯ ಗಿಳಿ ತುಂಬಾ ಒಳ್ಳೊಳ್ಳೇ ಮಾತುಗಳನ್ನು ಕಲಿತು ಹೇಳುತ್ತಾ ಇರುತ್ತೆ. ಅದರ ಬಾಯಿಯಲ್ಲಿ ಒಂದೇ ಒಂದು ಕೆಟ್ಟ ಮಾತು ಹೊರಡದು. ಬೇಕಾದರೆ ನಮ್ಮ ಗಿಳಿಯನ್ನು ನಿಮ್ಮ ಗಿಳಿಯ ಪಂಜರದಲ್ಲೇ ನಾಲ್ಕು ದಿನ ಇಟ್ಟುಕೊಂಡುಬಿಡಿ. ಸ್ನೇಹವಾಗಿರುತ್ತವೆ. ನಮ್ಮ ಗಿಳಿಯಿಂದ ನಿಮ್ಮ ಗಿಳಿ ಕೂಡಾ ನಾಲ್ಕು ಒಳ್ಳೆಯ ಮಾತುಗಳನ್ನು ಕಲಿತುಕೊಳ್ಳುತ್ತೆ" ಎಂದು ಶಾಸ್ತ್ರಿಗಳು ಮುದುಕಿಯೊಂದಿಗೆ ಹೇಳಿದರು.

ಅದರಂತೆ ಮುದುಕಿ ಶಾಸ್ತ್ರಿಗಳ ಮನೆಯ ಗಿಳಿಯನ್ನು ತಂದು ತನ್ನ ಗಿಳಿಯೊಂದಿಗೆ ಪಂಜರದಲ್ಲಿಟ್ಟಳು. ಇಷ್ಟು ಮಾಡಿದ ಮೇಲೆ ಅವಳಿಗೆ ದೊಡ್ಡ ಭಾರ ಕಳೆದಂತೆ ಸಂತೋಷವೆನಿಸಿತು.

ಅಷ್ಟರಲ್ಲಿ ಅವಳ ಮನೆಯಲ್ಲಿದ್ದ ಗಿಳಿ ಹೊಸದಾಗಿ ಬಂದ ಗಿಳಿಯನ್ನು ನೋಡಿ, ಕಣ್ಣು ಮುಚ್ಚಿ ತೆರೆಯುತ್ತ, "ಈ ಮುದುಕಿ ಸತ್ತರೆ ಒಳ್ಳೇದಿತ್ತು!" ಎಂದಿತು. ಕೂಡಲೇ ಶಾಸ್ತ್ರಿಗಳ ಮನೆಯ ಗಿಳಿ "ತಥಾಸ್ತು! ತಥಾಸ್ತು!" ಎಂದು ಉಚ್ಚರಿಸಿತು.

ಮುದುಕಿಗೆ ದೊಡ್ಡ ಸಿಟ್ಟು ಎದ್ದುಬಿಟ್ಟಿತು. ಕೂಡಲೇ ಅವಳು ಪಂಜರವನ್ನು ತೆರೆದು ಎರಡು ಗಿಳಿಗಳನ್ನೂ ಹೊರಗೆ ಬಿಟ್ಟು "ಎತ್ತಾದರೂ ಸಾಯಿರಿ!" ಎಂದು ಬೈದಳು.



# ಮೋಸ ಹೋದವರು

ಒಂದು ಊರಿನಲ್ಲಿ ರಾಮನಾಥ ಸೋಮನಾಥರೆಂಬ ಇಬ್ಬರು ಲಕ್ಷಾಧಿಪತಿಗಳಿದ್ದರು. ಅವರಿಬ್ಬರಿಗೂ ಮದುವೆಯ ಪ್ರಾಯಕ್ಕೆ ಬಂದ ಕುಮಾರಿಯರಿದ್ದರು. ಇಬ್ಬರೂ ತಮ್ಮ ಕುಮಾರಿಯರನ್ನು ಪಟ್ಟಣದಲ್ಲಿರುವ ಸುಬ್ಬಯ್ಯನೆಂಬ ಲಕ್ಷಾಧಿಕಾರಿಯ ಮಗನಿಗೆ ಕೊಡಬೇಕೆಂದು, ಒಬ್ಬರಿಗೆ ತಿಳಿಯದಂತೆ ಒಬ್ಬರು ಗುರುನಾಥನೆಂಬ ಮಧ್ಯವರ್ತಿಯನ್ನು ನಿಯೋಜಿಸಿ, ತಿರುಗಾಟ ಮತ್ತು ಇತರ ಖರ್ಚುಗಳಿಗಾಗಿ ಒಬ್ಬೊಬ್ಬರೂ ಐದೈದು ಸಾವಿರ ರೂಪಾಯಿ ಅವನಿಗೆ ಕೊಟ್ಟಿದ್ದರು.

ಆಮೇಲೆ ಅನೇಕ ವಾರಗಳ ವರೆಗೆ ಮಧ್ಯವರ್ತಿ ಗುರುನಾಥ ಕಾಣಲೇ ಇಲ್ಲ. ಅವನು ಎಲ್ಲಿ ಹೋದನೆಂದು ವಿಚಾರಿಸುವಾಗ ಅವನು ತನ್ನ ಮಗಳನ್ನು ಹತ್ತು ಸಾವಿರ ವರದಕ್ಷಿಣೆಯೊಂದಿಗೆ ಸುಬ್ಬಯ್ಯನ ಮಗನಿಗೆ ಕೊಟ್ಟು ಮದುವೆ ನಿಶ್ಚಯಮಾಡಿರುವನೆಂದು ಗೊತ್ತಾಯಿತು.

"ಇದೆಂತಹ ಮೋಸ?" ಎಂದು ಅವರಿಬ್ಬರೂ ಅವನನ್ನು ಕೇಳಿದರು.

ಅದಕ್ಕೆ ಗುರುನಾಥನು, "ನನಗಾದರೂ ಏನು ಗೊತ್ತಿದೆ? ನನ್ನ ಮಗಳೂ ಸುಬ್ಬಯ್ಯನ ಮಗನೂ ಪ್ರೇಮಿಸಿಕೊಂಡರಂತೆ. ನೀವೇನೋ ನನಗೆ ತಕ್ಕ ದಕ್ಷಿಣೆ ಕೊಡುವಿರಾದರೂ ಅವರ ಪ್ರೇಮಕ್ಕೆ ದ್ರೋಹಮಾಡಲು ಸಾಧ್ಯವೇ ನೀವೇ ಹೇಳಿ?" ಎಂದನು.





# ದೈವಾನುಗ್ರಹ

ಸಾವೂರು ಎಂಬಲ್ಲಿ ಹಿಂದೆ ಸಿಂಗನೆಂಬೊಬ್ಬ ಕಳ್ಳ ನಿದ್ದ. ಅವನು ಕಳ್ಳತನಕ್ಕೆ ಹೊರಡುವ ಮೊದಲು ಊರೊಳಗಿನ ಶಿವಾಲಯಕ್ಕೆ ಹೋಗಿ ಪ್ರದಕ್ಷಿಣೆ ನಮಸ್ಕಾರಮಾಡಿ, ಕಾರ್ಯದಲ್ಲಿ ಜಯವಾಗುವಂತೆ ಬೇಡಿಕೊಂಡು ಹೋಗುತ್ತಿದ್ದ. ತನ್ನ ಕೆಲಸ ನಿರ್ವಿಘ್ನ ವಾಗಿ ಸಾಗಿದರೆ ಅದು ಮಹಾದೇವನ ದಯವೆಂದೇ ನಂಬಿಕೊಂಡಿದ್ದ. ಅದಕ್ಕೆ ಸರಿಯಾಗಿ ಅವನ ಕೆಲಸಕ್ಕೆ ಒಮ್ಮೆ ಕೂಡಾ ವಿಘ್ನ ಬಂದಿರಲಿಲ್ಲ.

ಆದರೆ ಒಂದು ಸಾರಿ ಶಿವದೇವಾಲಯದಲ್ಲಿ ಬೇಡಿ ಕೊಂಡು ಹೋದರೂ, ಒಬ್ಬ ಧನಿಕನ ಮನೆಗೆ ಕನ್ನ ಕೊರೆಯುತ್ತಿದ್ದಾಗ ಸಿಕ್ಕಿಬಿದ್ದು ಬಿಟ್ಟ. ಧನಿಕನು ಅವನನ್ನು ತನ್ನ ಸೇವಕರಿಂದ ಮೈಮುರಿ ಹೊಡೆಸಿ ಬುದ್ಧಿ ಹೇಳಿ ಬಿಟ್ಟುಬಿಟ್ಟ. ಈ ಪೆಟ್ಟಿನಿಂದ ಸಿಂಗನಿಗೆ ಶಿವನ ಮೇಲೆ ನಂಬಿಕೆಗೆ ಭಂಗಬಂದಿತು. ಅವನು ಶಿವಾಲಯಕ್ಕೆ ಹೋಗಿ, "ಎಂಥಾ ಮಾಯದೇವ ನೀನು! ನಿನ್ನನ್ನು ನಂಬಿದುದಕ್ಕೆ ಒಳ್ಳೆಯ ಶಾಸ್ತಿ ಕೊಡಿಸಿದೆಯಲ್ಲ! ಇನ್ನು ನಿನ್ನನ್ನು ಪ್ರಾರ್ಥಿಸಿ ಫಲ ವಿಲ್ಲ! ದ್ರೋಹಿ ದೇವ ನೀನು" ಎಂದು ಕೋಪ ದಿಂದ ಹಿಂದಿರುಗಿದ. ಆ ದಿನ ಯಾವನೋ ಒಬ್ಬ ಸನ್ಯಾಸಿ ತನ್ನ ಶಿಷ್ಯ ವೃಂದದೊಂದಿಗೆ ಆ ಊರಿಗೆ ಬಂದು ತಳವೂರಿದ್ದ. ಎಲ್ಲರೂ ಆ ಸನ್ಯಾಸಿ ಯನ್ನು ದೇವರಂತೆ ನಮಸ್ಕಾರ ಮಾಡಿ ಪ್ರಾರ್ಥಿಸಿ ಕೊಳ್ಳುತ್ತಿದ್ದರು. ಸಿಂಗನಿಗೂ ಆ ಸನ್ಯಾಸಿಯ ಮೇಲೆ ನಂಬಿಗೆಯುಂಟಾಯಿತು. ಆದುದರಿಂದ ಅವನು ಕಳ್ಳತನಕ್ಕೆ ಹೊರಡುವಾಗ ಶಿವಾಲಯಕ್ಕೆ ಹೋಗುವುದನ್ನು ಬಿಟ್ಟು ಆ ಸನ್ಯಾಸಿಯ ಬಳಿಗೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ, "ಸ್ವಾಮಿ ನಡೆದಾಡುವ ದೇವರೇ, ನಾನು ಹೋಗುವ ಕೆಲಸ ಜಯವಾಗುವಂತೆ ಮಾಡಬೇಕು!" ಎಂದು ಪ್ರಾರ್ಥಿ ಸುವನು. "ಹಾಗೇ ಆಗುವುದು! ಹೋಗು ಪ್ರಿಯ ಭಕ್ತಾ" ಎಂದು ಅನುಗ್ರಹಿಸುವನು ಸನ್ಯಾಸಿ.

ಒಂದು ದಿನ ರಾತ್ರಿ ಆ ಸನ್ಯಾಸಿ ಪಕ್ಕದ ಊರಿನ ಒಬ್ಬ ಸಾಹುಕಾರನ ಮನೆಯಲ್ಲಿ ಅವರ ಆಮಂತ್ರಣ ದಂತೆ ಹೋಗಿ ಪೂಜೆ ನಿರ್ವಹಿಸುವನೆಂದು ಸಿಂಗನಿಗೆ ಗೊತ್ತಾಯಿತು. ಸಿಂಗ ಅವನಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆದನು.

ಆ ದಿನ ರಾತ್ರಿ ಸನ್ಯಾಸಿ ಹೋಗುವ ಆ ಸಾವು ಕಾರನ ಮನೆಯಲ್ಲೇ ಕಳ್ಳತನ ಮಾಡಬೇಕೆಂದು ಸಿಂಗ

ಆರ್. ರಾಮಕೃಷ್ಣ

ನಿಶ್ಚಯಿಸಿದ್ದ. ಅವನು ರಾತ್ರಿ ಬಹಳ ಹೊತ್ತಿನ ಮೇಲೆ ಸಾವುಕಾರನ ಮನೆಗೆ ಪ್ರವೇಶಿಸುವಾಗ, ಅಲ್ಲಿ ಎಲ್ಲರೂ ಮಲಗಿ ನಿದ್ದೆ ಮಾಡಿಕೊಂಡಿದ್ದರು. ಸನ್ಯಾಸಿಯ ಶಿಷ್ಯರು ದೇವರಕೋಣೆಯ ಎದುರಿನಲ್ಲಿ ಮಲಗಿಕೊಂಡಿದ್ದರು. ಬಾಗಿಲು ತೆರೆದೇ ಇದ್ದಿತು.

ಸಿಂಗನು ನೆಟ್ಟಗೆ ದೇವರಕೋಣೆಯೊಳಗೆ ಹೊಕ್ಕ. ಆಗ ಸನ್ಯಾಸಿ ಒಂದು ಗಂಟಿನೊಂದಿಗೆ ದೇವರ ಹಿಂದಿನಿಂದ ಅವನ ಮುಂದೆ ಬಂದು, "ಭಕ್ತಾ ಹೆದರಬೇಡ. ನೀನು ಈ ರಾತ್ರಿ ಇಲ್ಲಿಗೇ ಬರುವಿಯೆಂದು ದಿವ್ಯ ದೃಷ್ಟಿಯಿಂದ ತಿಳಿದಿದ್ದೇನೆ. ಈ ಗಂಟಿನಲ್ಲಿ ದೇವರಿಗೆ ಅಲಂಕರಿಸಿದ ನಗಗಳಿವೆ. ತೆಗೆದುಕೊಂಡು ಜಾಗ್ರತೆಯಾಗಿ ಹೋಗಿಬಿಡು!" ಎಂದನು.

ಸಿಂಗನಿಗೆ ತುಂಬಾ ಸಂತೋಷವಾಯಿತು. ಅವನು ಸನ್ಯಾಸಿ ಕೊಟ್ಟ ಗಂಟನ್ನು ತೆಗೆದುಕೊಂಡು ಅವನ ಕಾಲಿಗೆ ಬಿದ್ದು "ಸ್ವಾಮಿ, ನಿಜವಾದ ದೇವರು ನೀವೇ! ನೀವೇ!" ಎಂದನು.

ಅಲ್ಲಿಂದ ಹೊರಟು ಬರುತ್ತಾ ಅವನು ಶಿವಾಲಯದ ಹತ್ತಿರ ನಿಂತು, "ನೋಡಿದೆಯಾ ಶಿವಾ! ನನ್ನ ಸನ್ಯಾಸಿ ದೇವರು ನನ್ನನ್ನು ರಕ್ಷಿಸಿದ್ದಲ್ಲದೆ ಸಹಾಯ ಕೂಡಾ ಮಾಡಿದ್ದಾರೆ. ನೀನೂ ದೇವರು ಅಂತ ಇಲ್ಲಿರುವಿಯಲ್ಲ, ಏತಕ್ಕೋ?" ಎಂದು ತಿರಸ್ಕಾರವಾಗಿ ಹೇಳಿ ತನ್ನ ಮನೆ ಸೇರಿಕೊಂಡ.

ಮಾರನೇ ದಿನ ರಾತ್ರಿ ಸನ್ಯಾಸಿ ತನ್ನ ಶಿಷ್ಯರೊಂದಿಗೆ ಸಿಂಗನ ಮನೆಯ ಮೇಲೆ ಬಿದ್ದು ಅಲ್ಲಿದ್ದ ನಗನಟ್ಟುಗಳನ್ನೆಲ್ಲಾ ಕೊಳ್ಳೆ ಹೊಡೆದುಕೊಂಡು ಹೋಗಿಬಿಟ್ಟ.

ಬೆಳಗಾದ ಕೂಡಲೇ ಪಕ್ಕದ ಊರಿನ ಸಾವುಕಾರನ ಮನೆಯ ಆಳುಗಳಿಬ್ಬರು ಬಂದು, "ಸಾವುಕಾರರು ನಿನ್ನನ್ನು ಕರೆದುಕೊಂಡು ಬರಲು ಹೇಳಿದ್ದಾರೆ" ಎಂದು ಹೇಳಿ ಸಿಂಗನನ್ನು ಹಿಡಿದುಕೊಂಡು ಹೋದರು. ಸಿಂಗನ ಪ್ರಾಣ ತಟಪಟ ಹೊರಳಾಡಿಕೊಂಡಿರಲು, ದಾರಿಯಲ್ಲಿ ಶಿವಾಲಯದ ದೇವರಿಗೆ ಮನಸ್ಸಿನಲ್ಲೇ ವಂದಿಸುತ್ತ "ಸ್ವಾಮಿ, ಈಸಾರಿ ನನ್ನನ್ನು ಕಾಪಾಡಿದೆಯೆಂದರೆ ನಾನು ಈ ಕಳ್ಳತನದ ವೃತ್ತಿಯನ್ನೇ ಬಿಟ್ಟುಬಿಡುತ್ತೇನೆ!" ಎಂದುಕೊಂಡ.

ಸಿಂಗನು ಸಾವುಕಾರನ ಮನೆಯನ್ನು ತಲುಪುವುದರೊಳಗೆ ಸನ್ಯಾಸಿ ನಗಗಳೊಂದಿಗೆ ರಾಜಭಟರಿಗೆ ಸಿಕ್ಕಿಬಿದ್ದ ಸಂಗತಿ ಆ ಸಾವುಕಾರನಿಗೆ ತಿಳಿಯಿತು. ಅವನ ಮನೆಯ ನಗಗಳೂ ಆ ಸನ್ಯಾಸಿಯ ಹತ್ತಿರ ಇವೆಯೆಂದು ಗೊತ್ತಾಯಿತು. ಆ ಸನ್ಯಾಸಿಯ ಮಾತು ಕೇಳಿ ನಿರಪರಾಧಿ ಸಿಂಗನನ್ನು ಹಿಡಿಸಿದುದಕ್ಕೆ ಕ್ಷಮೆ ಕೇಳಿ ಸಾವುಕಾರ ಸಿಂಗನನ್ನು ಬಿಟ್ಟುಬಿಟ್ಟ. ಮನೆಗೆ ಹಿಂದಿರುಗುತ್ತಾ ಸಿಂಗ, ತನ್ನನ್ನು ಕಾಪಾಡಿದುದಕ್ಕೆ ಮತ್ತೆ ಮತ್ತೆ ಶಿವನಿಗೆ ನಮಸ್ಕಾರ ಮಾಡಿದ. ಕಳ್ಳತನವನ್ನೂ ಬಿಟ್ಟ.





# ಪಕ್ಷಪಾತ

ಪೂರ್ವಕಾಲದಲ್ಲಿ ವಿಜಯಪುರ ರಾಜ್ಯವನ್ನು ಪಾಲಿಸಿಕೊಂಡಿದ್ದ ಅಮರಸಿಂಹನೆಂಬ ರಾಜನಿಗೆ ಇಬ್ಬರು ಕುಮಾರರಿದ್ದರು. ಹಿರಿಯವನಿಗೆ ವೀರಸಿಂಹನೆಂದೂ, ಎರಡನೆಯವನಿಗೆ ಶೂರಸಿಂಹನೆಂದೂ ಹೆಸರು. ಅಮರಸಿಂಹರಾಜನು ತೀರಿಹೋದ ಮೇಲೆ ಪದ್ಧತಿಯಂತೆ ವೀರಸಿಂಹನೇ ಪಟ್ಟವನ್ನೇರಿ ರಾಜನಾದನು. ಶೂರಸಿಂಹನು ಅಣ್ಣನ ಮೇಲೆ ತುಂಬ ಭಕ್ತಿ ವಿಶ್ವಾಸಗಳುಳ್ಳವನಾಗಿ, ರಾಜಕಾರ್ಯಗಳಲ್ಲಿ ಅಣ್ಣನಿಗೆ ಬಲಭುಜದಂತೆ ಸಹಾಯಕನಾಗಿದ್ದನು.

ಹೀಗಿರುವಾಗ ಸೇನಾಧಿಪತಿಯಾಗಿದ್ದವನು ಆಕಸ್ಮಿಕವಾಗಿ ಸತ್ತುಹೋದನು. ಆ ಪದವಿಯಲ್ಲಿ ತನ್ನ ತಮ್ಮನನ್ನೇ ನಿಯಮಿಸುವುದು ಒಳ್ಳೆಯದೆಂದು ವೀರಸಿಂಹನು ಮಂತ್ರಿಯೊಂದಿಗೆ ಹೇಳಿದನು.

"ಮಹಾರಾಜ, ಸೇನಾಧಿಪತಿಯ ನಿಯಮಕ್ಕೆ ನಮ್ಮ ದೇಶದಲ್ಲಿ ಪೂರ್ವದಿಂದ ನಡೆದುಕೊಂಡು ಬಂದ ಒಂದು ಆಚಾರವಿದೆ. ಯುದ್ಧವಿದ್ಯೆಗಳಲ್ಲಿ ಸ್ಪರ್ಧೆಗಳನ್ನಿಟ್ಟು, ಅವುಗಳಲ್ಲಿ ಗೆದ್ದವನನ್ನೇ ಸೇನಾಧಿಪತಿಯಾಗಿ ನಿಯಮಿಸಬೇಕು. ಅದನ್ನು ಉಲ್ಲಂಘಿಸುವುದು ಸರಿಯಲ್ಲ. ಹಾಗೆ ಮಾಡಿದರೇನೇ ಸೈನಿಕರೆಲ್ಲ ಅವನನ್ನು ಗೌರವಿಸಿಕೊಂಡಿರುತ್ತಾರೆ" ಎಂದನು. ಈ ವಿಷಯ ತಿಳಿದು ವೀರಸಿಂಹನ ಎದೆಗೆ ಕಲ್ಲು ಬಿದ್ದ ಹಾಗಾಯಿತು. ಯುದ್ಧವಿದ್ಯೆಗಳಲ್ಲಿ ಸ್ಪರ್ಧೆ ಇಡಿಸಿಬಿಟ್ಟರೆ ಅದರಲ್ಲಿ ಶೂರಸಿಂಹನೇ ಗೆಲ್ಲುವನೆಂದು ಹೇಳಲು ಸಾಧ್ಯವಿಲ್ಲ. ಶೂರಸಿಂಹನು ಯುದ್ಧವಿದ್ಯೆಗಳಲ್ಲಿ ಪ್ರಾವೀಣ್ಯತೆ ಗಳಿಸಿದವನಾಗಿದ್ದರೂ ಅವನನ್ನು ಮೀರಿಸುವ ಶೂರರು ದೇಶದಲ್ಲಿ ಇಲ್ಲವೆಂದು ನಂಬಲು ಸಾಧ್ಯವಿಲ್ಲವಷ್ಟೆ? ಆಚಾರಕ್ಕೆ ಭಂಗಬಾರದಂತೆ ತನ್ನ ತಮ್ಮನನ್ನು ಸೇನಾಧಿಪತಿಯಾಗಿ ಮಾಡುವುದು ಹೇಗೆಂದು ವೀರಸಿಂಹನಿಗೆ ತಿಳಿಯಲಿಲ್ಲ.

"ಪ್ರಭೂ, ಇದೊಂದು ಸಣ್ಣ ವಿಷಯ. ಸ್ಪರ್ಧೆ ನಡೆಯಲಿ. ಶೂರಸಿಂಹನೇ ಗೆದ್ದು ಸೇನಾಧಿಪತಿಯಾಗುತ್ತಾನೆ. ಚಿಂತಿಸಬೇಡಿ" ಎಂದು ಮಂತ್ರಿ ಧೈರ್ಯ ಹೇಳಿದನು. ಬೇರೆ ಉಪಾಯವಿಲ್ಲದೆ ವೀರಸಿಂಹನು ಸೇನಾಧಿಪತಿ ಪದವಿಗೆ ಸ್ಪರ್ಧೆ ನಡೆಯಿಸಲು ನಿಶ್ಚಯಿಸಿದನು. ಸೇನಾಧಿಪತಿ ಪದವಿಗೆ ಯುದ್ಧವಿದ್ಯೆಯ ಸ್ಪರ್ಧೆ ನಡೆಯುವುದೆಂದೂ ಅದರಲ್ಲಿ ಭಾಗವಹಿಸಬಲ್ಲ ವೀರಯುವಕರು ಬರಬಹುದೆಂದೂ ಡಂಗುರಸಾರಲಾಯಿತು.

ಜಿ. ಶಿವಕುಮಾರ

ವಿಜಯಪುರದಲ್ಲಿ ಸುಧನ್ವನೆಂಬ ಯುವಕನು ಎಲ್ಲಾ ಬಗೆಯ ಯುದ್ಧವಿದ್ಯೆಗಳಲ್ಲಿಯೂ ಪ್ರವೀಣ ನಾಗಿದ್ದನು. ಅವನು ಸ್ಪರ್ಧೆಯಲ್ಲಿ ಭಾಗವಹಿಸಲು ಬಂದಿರುವ ಸಂಗತಿ ತಿಳಿದು, ಅವನ ಕೈಯಲ್ಲಿ ಸೋತ ವರನೇಕರು ಸ್ಪರ್ಧೆಗೆ ನಿಲ್ಲದೆ ಹಿಮ್ಮರಳಿ ಹೋಗಿ ಬಿಟ್ಟರು. ಸುಧನ್ವನು ಉಳಿದ ಸ್ಪರ್ಧಾಳುಗಳನ್ನೆಲ್ಲಾ ಸೋಲಿಸಿ, ಶೂರಸಿಂಹನೊಂದಿಗೆ ಸ್ಪರ್ಧೆಗೆ ನಿಂತನು.

ಮೊದಲನೇ ದಿನ ಇಬ್ಬರಿಗೂ ಮಲ್ಲಯುದ್ಧ ನಡೆಯಿತು. ಅದರಲ್ಲಿ ಯಾರು ಗೆದ್ದರೆಂದು ನಿರ್ಣ ಯಿಸಲು ಯಾರಿಗೂ ಸಾಧ್ಯವಾಗಲಿಲ್ಲ. ಇಬ್ಬರೂ ಸರಿಸಮರೆಂದೇ ನಿರ್ಣಾಯಕರು ಹೇಳಿಬಿಟ್ಟರು.

ಎರಡನೇ ದಿನ ಬಿಲ್ಲುವಿದ್ಯೆಯ ಪ್ರದರ್ಶನ ನಡೆ ಯಿತು. ಅದರಲ್ಲಿ ಸುಧನ್ವನು ಶೂರಸಿಂಹನಿಗಿಂತ ಹೆಚ್ಚಿನ ಕೌಶಲವನ್ನೇ ತೋರಿಸಿದನು. ಅದನ್ನು ನೋಡಿ ವೀರಸಿಂಹನಿಗೆ ದಿಗಿಲಾಯಿತು. ಆಗ ಮಂತ್ರಿ ಅವನಿಗೆ ಧೈರ್ಯ ಹೇಳುತ್ತ, "ಏನೂ ಪರವಾಗಿಲ್ಲ. ಚಿಂತಿಸಬೇಡಿ. ನಾಳಿನ ಸ್ಪರ್ಧೆಯಲ್ಲಿ ಶೂರಸಿಂಹನೇ ಗೆಲ್ಲುತ್ತಾನೆ. ಅದಕ್ಕೆ ಸಂದೇಹವೇ ಬೇಡ" ಎಂದು ದೃಢವಾಗಿ ಹೇಳಿದನು. ಬಿಲ್ಲುವಿದ್ಯೆಯಲ್ಲಿಯೂ ಇಬ್ಬರೂ ಸಮಾನರೆಂದರು ನಿರ್ಣಾಯಕರು.

ಕೊನೆಯ ದಿನದ ಸ್ಪರ್ಧೆ ಖಡ್ಗಯುದ್ಧದ್ದು. ಯುದ್ಧವು ಉಚ್ಚಗಟ್ಟಕ್ಕೆ ಬರುವ ಹೊತ್ತಿಗೆ ಸುಧನ್ವನ ಖಡ್ಗ ಕ್ಷಣಾಲನೆ ಮುರಿದುಹೋಯಿತು ಆ ಕೂಡಲೇ ಅವನೇ ಗೆದ್ದನೆಂದು ಸಾರಲಾಯಿತು. ಮೋಸವೋ ಮತ್ತೇನೋ ಆಗಿ ತನಗೆ ಪರಾಜಯ ವಾಯಿತೆಂದು ಸುಧನ್ವನು ಬೇಸತ್ತುಕೊಂಡನು.

ನ್ಯಾಯಬುದ್ಧಿಯುವನಾದ ವೀರಸಿಂಹರಾಜನು ತನಗೆ ನಡೆದ ಅನ್ಯಾಯವನ್ನು ಸರಿ ಮಾಡುವನೆಂಬ ನಂಬುಗೆಯಿಂದ ಸುಧನ್ವನು ಅವನ ಕಡೆಗೆ ನೋಡಿ ದನು. ಆದರೆ ವೀರಸಿಂಹನು ತನ್ನ ತಮ್ಮನೇ ಗೆದ್ದ ನೆಂಬ ಸಂತೋಷದಲ್ಲಿ, ಅವನಿಗೆ ಸೇನಾಧಿಪತಿಯ ಪಟ್ಟಕಟ್ಟುವಂತಾದುದಕ್ಕೆ ಉಬ್ಬಿಹೋಗಿದ್ದನು. ಮಂತ್ರಿಯಾದರೂ ತನಗೆ ಅನ್ಯಾಯವಾಗಿರುವುದನ್ನು ತಿಳಿದಿರುವನೇನೋ ಎಂದುಕೊಂಡು ಸುಧನ್ವನು ಮಂತ್ರಿಯ ಕಡೆಗೆ ನೋಡಿದನು. ಮಂತ್ರಿ ಕೂಡಲೇ ತನ್ನ ನೋಟವನ್ನು ಬೇರೆ ಕಡೆಗೆ ತಿರುಗಿಸಿಕೊಂಡನು.

ಇನ್ನು ತನಗೆ ಪ್ರಜೆಗಳಾದರೂ ನ್ಯಾಯನೀಡುವ ರೆಂಬ ಆಶೆಯಿಂದ ಅವನು ಪ್ರೇಕ್ಷಕರ ಕಡೆಗೆ ನೋಡಿ ದನು. ಅವರೆಲ್ಲ ತಮ್ಮ ರಾಜನ ತಮ್ಮನಿಗಾದ ವಿಜಯವನ್ನು ತಮ್ಮ ವಿಜಯದಂತೆಯೇ ಭಾವಿಸಿ ಜಯಜಯಧ್ವಾನ ಮಾಡಿಕೊಂಡಿದ್ದರು. ಸುಧನ್ವನಿಗೆ ನ್ಯಾಯವೇ ನಡೆದಿದೆಯೋ ಅನ್ಯಾಯವೇ ಆಗಿ ದೆಯೋ ಅವರಾರಿಗೂ ಲಕ್ಷ್ಯವಿರಲಿಲ್ಲ. ಸುಧನ್ವನು ಮಾತಾಡದೆ ತನ್ನ ಮನೆಯ ದಾರಿ ಹಿಡಿದನು.





June 1977

# ಮಾಯಾಸರೋವರ

೧೭

[ಕೃಪಾಣಜಿತ್ತು ಮೋಸದ ಮಾತುಗಳಿಂದ ಗಡೇಗುಡ್ಡನ ಕಡೆಯವರನ್ನು ನಂಬಿಸಲು ನೋಡಿದನು. ಅವನನ್ನು ಕೊಲ್ಲಲು ಗಡೇಗುಡ್ಡನು ಅವನು ನಿದ್ರೆಯಲ್ಲಿರುವಾಗ ಮನೆಗೇ ಬೆಂಕಿ ಹಚ್ಚಿಸಿದನು. ಕೃಪಾಣಜಿತ್ತು ಆ ಗುಡಿಸಲಿನಿಂದ ಹೊರಗೆ ಹಾರಿ ಕೈಗೆ ಸಿಕ್ಕಿದ ಮರದ ಕೊಂಬೆಯಿಂದ ಕಳ್ಳರನ್ನು ಹೊಡೆಯುತೊಡಗಿದನು. ಇದೆಲ್ಲವನ್ನೂ ನೋಡುತ್ತ ಇಬ್ಬರು ವಿಚಿತ್ರ ಮನುಷ್ಯರು ದೂರದಲ್ಲಿ ನಿಂತಿದ್ದರು.]

ಅರಣ್ಯದ ಮರಗಳ ಗುಂಪಿನೆಡೆಯಲ್ಲಿ ನಿಂತು ಕಳ್ಳರ ...ರಿಯಲ್ಲಿ ಹೊರಟ ಆ ಬೆಂಕಿಯನ್ನೂ, ಮಾರಣ ...ೋಮದಂತಹ ಜಗಳವನ್ನೂ ಅತ್ಯಾಶ್ಚರ್ಯದಿಂದ ...ೋಡುತ್ತಿದ್ದರು ಆ ವಿಚಿತ್ರ ಮನುಷ್ಯರು. ಒಂದು ...ಮಿಷ ಸುಮ್ಮನೆ ನೋಡಿದ ಮೇಲೆ ಒಬ್ಬನು ತನ್ನ ...ಯನ್ನು ಹಿಡಿದು ಇನ್ನೊಬ್ಬನೊಂದಿಗೆ, "ಅಣ್ಣಾ ...ರ್ಣನಖಿ! ಆ ಬಡಕೇರಿಯ ಮೇಲೆ ಯಾರೋ ...ತ್ರುಗಳು ಮುತ್ತಿ ಸರ್ವ ನಾಶಮಾಡುತ್ತಿರುವ ...ಾಗಿದೆ ಪಾಪ! ಸ್ವಲ್ಪ ಹೋಗಿ ಏನು ಸಂಗತಿ ಅಂತ ...ೋಡೋಣವೇ?" ಎಂದನು.

ತಮ್ಮನ ಮಾತು ಕೇಳಿ ಸರ್ಪನಖನೆಂಬ ಅಣ್ಣನು ನಿರ್ಲಕ್ಷ್ಯವಾಗಿ, "ಸರ್ವ ನಾಶಮಾಡಲಿ, ಏನು ಬೇಕಾದರೂ ಮಾಡಲಿ. ಸರ್ಪಸ್ವರಾ, ನೀನೇಕೆ ಕತ್ತಿ ತೆಗೆಯುವೆ? ನಮಗೇಕೆ ಅವರ ಕರ್ಮ? ನಮ್ಮದು ಯಾವ ಲೋಕ? ಇದು ಯಾವಲೋಕ? ಇವರ ಗೊಡವೆ ಕಟ್ಟಿಕೊಂಡು ನಮಗೇನಾಗ ಬೇಕಾಗಿದೆ? ನಾವು ಬಂದ ಕೆಲಸ ಮುಖ್ಯ. ಆ ಕೆಲಸದ ಮೇಲೆ ನಮ್ಮ ಜಲಾಶ್ವಗಳ ಚಾಲಪಾದಗಳು ಸವೆದು ಹೋಗುವ ಹಾಗೆ ಈ ಕಾಡುಗುಡ್ಡಗಳನ್ನೆಲ್ಲಾ ತಿರುಗಾಡಿದೆವಲ್ಲಾ? ಇನ್ನೂ ಯಾವ ಸುಳಿವೂ ಸಿಕ್ಕಿಲ್ಲ!



17-1 283



ಈ ಗಲಾಟೆಯ ವಿಕೃತ ಸೌಂದರ್ಯವನ್ನು ನೋಡಿದ್ದು ಸಾಕು ಬಿಡು" ಎಂದನು.

"ನಿನ್ನ ಮಾತು ನಿಜವೇ. ಆದರೂ ಅಣ್ಣ! ನನಗೊಂದು ಅನುಮಾನ ಕಾಣುತ್ತದೆ; ತಡೆ" ಎಂದು ಹೇಳಿ ಸರ್ಪಸ್ವರನು ತನ್ನ ಕುದುರೆಯ ಮೇಲೆ ತಟ್ಟನೆ ನಿಂತು ಹಾರಿ ಮರದ ಕೊಂಬೆಯನ್ನು ಎಟಕರಿಸಿಕೊಂಡು ನೇತಾಡುತ್ತ ಆ ಕುಳ್ಳರ ಕೇರಿಯ ಕಡೆಗೆ ನೋಡಿ, "ಅಣ್ಣಾ! ಇದೇನೋ ಬಹಳ ವಿಚಿತ್ರವಾಗೇ ಇದೆ. ಭಯಂಕರವಾದ ಗುಡ್ಡದಂತಹ ನರವಾನರವೊಂದು ಒಬ್ಬ ಸಾಧಾರಣ ಮನುಷ್ಯನ ಮಾತಿಗೆ ಕಟ್ಟುಬಿದ್ದು ಕುಳ್ಳ ಜನಾಂಗವನ್ನು ಚಿತ್ರವಧೆ ಮಾಡುತ್ತಿದೆ. ಆ ಕುಳ್ಳರೂ ಸಾಮಾನ್ಯದವರಲ್ಲ! ಏನು ಅವರ ಸಾಹಸ! ಎಂಥ ಧೈರ್ಯ! ಕೆಂಪಿರುವೆಗಳ ಹಾಗೆ ಸತ್ತರೂ ಬಿಡುವವರಲ್ಲ! ಇದನ್ನು ನೋಡಿ ನಾವು ಸುಮ್ಮನಿರುವುದು ಹೇಗೆ?" ಎಂದನು.

"ಹಾಗೇನು? ಹಾಗಿದ್ದರೆ ಆ ನರವಾನರವನ್ನೂ ಮನುಷ್ಯನನ್ನೂ ನಾವು ಜೀವದೊಂದಿಗೆ ಹಿಡಿಯಲೇ ಬೇಕು. ಆ ಮನುಷ್ಯನ ಮೂಲಕ ಕಾಣೆಯಾಗಿ ಹೋದ ನಮ್ಮವನ ಸಮಾಚಾರವೇನಾದರೂ ತಿಳಿಯಬಹುದು. ಯಾವುದಕ್ಕೂ ನೋಡಿಬಿಡೋಣ." ಎಂದು ಸರ್ಪನಖನು ತನ್ನ ಕುದುರೆಯನ್ನು ಹುರುಡಿಸಿ, ಜೀನಿನಲ್ಲಿ ನೇತಾಡುತ್ತಿದ್ದ ತಾಮರೆ ದಂಟಿನ ಹಗ್ಗವನ್ನು ಕೈಯಲ್ಲೆತ್ತಿಕೊಂಡನು.

ಇಬ್ಬರೂ ತಮ್ಮ ಕುದುರೆಗಳ ಮೇಲೆ ವೇಗವಾಗಿ ಗಡೇಗುಡ್ಡನ ಗೂಡಾರದ ಕಡೆಗೆ ಓಡಿದರು. ಆ ಸಮಯದಲ್ಲಿ ನರವಾನರವು ಕುಪ್ಪಳಿಸುತ್ತ ತನ್ನ ಬಲವಾದ ಕೈಗಳಿಂದ ಗುಡಿಸಲು ಮಗುಚಿ ಬೀಳುವಂತೆ ಮಾಡುತ್ತಿತ್ತು. ಕೃಪಾಣಜಿತ್ತು ಹುಚ್ಚು ಹಿಡಿದವನ ಹಾಗೆ ಕೂಗುತ್ತ ತನ್ನ ಮೇಲೆ ಬರುವ ಕುಳ್ಳರನ್ನು ಮರದ ಕೊಂಬೆಯಿಂದ ಹೊಡೆಯುತ್ತಿದ್ದ. ಆ ಹೊಡೆತಕ್ಕೆ ಕುಳ್ಳರು ಬೀಳುತ್ತಲೂ, ಏಳುತ್ತಲೂ, ಸಾಯುತ್ತಲೂ ಇದ್ದರೂ, ಒಬ್ಬರಾದರೂ ಹೆದರಿ ಓಡುವವರಾಗಿರಲಿಲ್ಲ. ಮತ್ತೆ ಮತ್ತೆ ಎದ್ದೆದ್ದು ಬಂದು ಕೃಪಾಣಜಿತ್ತು ನರವಾನರಗಳನ್ನು ಸಿಕ್ಕಿದ ಹಾಗೆ ಹೊಡೆಯುತ್ತಿದ್ದರು.

"ಅಣ್ಣಾ, ಈ ನರವಾನರವನ್ನು ನಾನು ನೋಡಿಕೊಳ್ಳುತ್ತೇನೆ. ನೀನು ಆ ಗೂಳಿಯಂತಹ ಮನುಷ್ಯನನ್ನು ಹಿಡಿದು ಬಂಧಿಸು." ಎಂದು ಸರ್ಪಸ್ವರನು ತನ್ನ ಕುದುರೆಯನ್ನು ನರವಾನರದ ಕಡೆಗೆ ಓಡಿಸಿಕೊಂಡು ಹೋದನು.

ಸರ್ಪನಖನು ತಾಮರೆದಂಟಿನ ಹಗ್ಗವನ್ನು ಬೀಸುತ್ತ, ಅದರಲ್ಲಿದ್ದ ಉರುಳು ಕೃಪಾಣಜಿತ್ತುವಿನ ಕಂಠಕ್ಕೆ ಬೀಳುವಂತೆ ಗುರಿಯಿಟ್ಟು ಬೀಸಿ ಎಸೆದು "ಮಾಯಾ ಸರೋವರೇಶ್ವರನಿಗೆ ಜಯವಾಗಲಿ!" ಎಂದು ತೀಕ್ಷ್ಣವಾದ ಕೀಚು ಶಬ್ದದಿಂದ ಅರಚಿದನು.

ಕೃಪಾಣಜಿತ್ತುವಿನ ಕೊರಳಿಗೆ ಉರುಳು ಬೀಳುವುದಕ್ಕೂ, ಆ ಕೀಚು ಶಬ್ದ ಹೊರಡುವುದಕ್ಕೂ

ೋಯಿತು. ಮರುಕ್ಷಣ ಆತನ ಆಟ ಕಟ್ಟಿತು. ಚಿತ್ರಾಕಾರದ ಕುದುರೆಗಳ ಮೇಲೆ ಆಕಸ್ಮಿಕವಾಗಿ ನ್ನು ಮೇಲೆ ಬಂದುಬಿದ್ದ ಸರ್ಪನಖಿ ಸರ್ಪಸ್ವರ ನ್ನು ನೋಡಿದ ಕೂಡಲೇ ಕೃಪಾಣಜಿತ್ತುವೂ ಳ್ಳರೂ ನಿಶ್ಚೇಷ್ಟಿತರಾದರು. ಸರ್ಪನಖಿನು ಬೀಸಿದ ಮರೆದಂಟಿನ ಹಗ್ಗದ ಉರುಳು ಕೃಪಾಣಜಿತ್ತು ನ ಕಂಠಕ್ಕೆ ಬಿದ್ದು ಬಿಗಿಯತೊಡಗಿತು. ಅಷ್ಟರೊಳಗೆ ಪಾಣಜಿತ್ತು ಸಾಯುವವನ ಹಾಗೊಮ್ಮೆ ಕೂಗಿ, ರುಳು ಬಿಸುಟವನನ್ನು ಪಿಳಿಪಿಳಿ ನೋಡುತ್ತ ಅಯ್ಯಯ್ಯಾ ! ಕೊಲ್ಲಬೇಡ ! ನಾನೂ ನಿನ್ನಂಥ ನುಷ್ಯನೇ. ನಿನ್ನ ಕುದುರೆಯಂಥದೇ ಒಂದು ರಾನೆಯ ಮೊಸಳೇ ಮಹಾ ಮನುಷ್ಯನಿಗೆ ನಾನು ಂಬಾ ಸಹಾಯಮಾಡಿದ್ದೇನೆ" ಎಂದ. ಅಂಥ ಮಯದಲ್ಲಿಯೂ ಬದುಕುವ ಆಶೆಯಿಂದ ಏನೋ ಪಕ ಬಂದಿತ್ತು ಅವನಿಗೆ.

ಉರುಳನ್ನು ಎಳೆಯದೆ ಅವನ ಮಾತನ್ನು ಕೇಳುತ್ತ ರ್ಪನಖಿನು ಆಶ್ಚರ್ಯಪಟ್ಟು, "ಹಾಗಾದರೆ ನೀನು ನ್ನು ಮಕರಕೇತುವನ್ನು ನೋಡಿದ್ದೀ ಎಂದಾಯಿತು. ಷ್ಟು ದೊಡ್ಡ ಮಹಾಯೋಧನು ನಿನ್ನ ಸಹಾಯ ದಿರಬೇಕಾದರೆ, ಅವನು ಭಾರೀ ಕಷ್ಟಕ್ಕೆ ಸಿಕ್ಕಿರ ಉ. ಆ ಮಕರಕೇತು ಈಗ ಎಲ್ಲಿದ್ದಾನೆಂಬುದು ಗೆ ಗೊತ್ತಿದೆ ಎಂದಾಯಿತು. ಎಲ್ಲಿದ್ದಾನೆ ಬೇಗ ಳು." ಎಂದು ಕೇಳಿದನು.

ಕೃಪಾಣಜಿತ್ತು ಕೈಗಳೆರಡನ್ನೂ ಮುಂದೆ ಚಾಚಿ, ನಿನ್ನ ಪ್ರಶಸ್ತವಾದ ತಾವರೇದಂಟಿನ ಹಗ್ಗ ನ್ನು ಸಡಿಲುಮಾಡಲು ಬಿಡಯ್ಯಾ. ಮಾತಾಡಲಿಕ್ಕೇ ವಾಗಿದೆ. ನಾನು ಹೇಗೆ ಉತ್ತರ ಕೊಡಲಿ? ನ್ನು ಸ್ವಲ್ಪ ಸಡಿಲುಮಾಡಲು ಅನುಮತಿ ಕೊಡು ವಾ?" ಎಂದು ಪ್ರಾರ್ಥಿಸಿದ, ಕುತ್ತಿಗೆಯ ರುಳಿನೆಡೆಗೆ ಕೈತುರುಕಿಸಲು ಪ್ರಯತ್ನಿಸುತ್ತ. ಾಗೇ ಮಾಡು. ಜಾರಿಸಿಕೊಳ್ಳಬೇಡ. ಓಡಲು



ಪ್ರಯತ್ನಮಾಡಿದರೆ ಈ ಹಗ್ಗವೇ ನಿನಗೆ ಯಮಪಾಶ ವಾಗುತ್ತದೆ, ಎಚ್ಚರ !" ಎಂದ ಸರ್ಪನಖಿ.

ಕೃಪಾಣಜಿತ್ತು ಕುತ್ತಿಗೆಯ ಉರುಳನ್ನು ಎರಡು ಕೈಗಳಿಂದಲೂ ಎಳೆದು ಸಡಿಲುಮಾಡಿ, ಬಲವಾಗಿ ಒಮ್ಮೆ ಶ್ವಾಸ ಎಳೆದುಕೊಂಡನು.

"ಅಯ್ಯಾ, ನಿಜ ಹೇಳುತ್ತೇನೆ. ಆ ಮಕರಕೇತು ಈಗ ಎಲ್ಲಿರುವನೆಂಬುದು ನನಗೆ ತಿಳಿಯದು. ನಿನ್ನನ್ನು ನೋಡಿದ ಕೂಡಲೇ ನನಗೆ ಅವನದೇ ನೆನಪು ಬಂತು. ಅಷ್ಟೇ ಅಲ್ಲ, ನಡೆದ ಸಂಗತಿ ಎಲ್ಲಾ ನೆನಪಿಗೆ ಬಂತು. ಈಗ್ಗೆ ಕೆಲವು ದಿನಗಳ ಕೆಳಗೆ ಅಮರಾವತೀ ನಗರದವ ನಾದ ಜಯಶೀಲನೆಂಬವನೂ, ಅವನ ಸ್ನೇಹಿತನಾದ ಕಾಪಾಲಿಕನೊಬ್ಬನೂ ಅರಣ್ಯದಲ್ಲಿದ್ದ ಮಕರಕೇತುವಿಗೆ ನಾನಾ ಹಿಂಸೆ ಕೊಟ್ಟರಂತೆ. ಇದನ್ನೆಲ್ಲಾ ಅರಣ್ಯ ಪ್ರಾಂತದಲ್ಲಿರುವವರು ಹೇಳಿದುದರಿಂದ ನನಗೆ ತಿಳಿಯಿತು." ಎಂದನು. ಅವನ ಮಾತು ಕೇಳು ತ್ತಿದ್ದ ಸರ್ಪನಖಿನಿಗೆ ಸಿಟ್ಟಿನಿಂದ ಕಣ್ಣು




ಕೆಂಪಗಾಗಲು, "ಎಲವೋ ಮೋಸಗಾರಾ! ಸಾಕು ಮಾಡು ನಿನ್ನ ಹಾಳು ಹರಟೆ. ನಾನು ಕೇಳಿದ್ದೇನು? ನೀನು ಹೇಳುವುದೇನು? ಮಕರಕೇತುವಿಗೆ ಏನೋ ಸಹಾಯ ಮಾಡಿದೆನೆಂದು ಹೇಳಿದೆಯಲ್ಲವೆ? ಅವನು ಈಗ ಎಲ್ಲಿದ್ದಾನೆಂತಲೂ ಕೇಳಿದೆ. ಅದಕ್ಕೆ ಉತ್ತರ ಕೊಡುವುದನ್ನು ಬಿಟ್ಟು ಅರ್ಥವಿಲ್ಲದ ಮಾತುಗಳಿಂದ ಕಾಲಹರಣ ಮಾಡುವೆಯೇನು? ಮಕರಕೇತು ಕ್ಷೇಮವಾಗಿದ್ದಾನೋ ಮೊದಲು ಹೇಳು" ಎಂದನು.

ಕೃಪಾಣಜಿತ್ತುವಿಗೆ ಏನು ಹೇಳಲೂ ತೋರಲಿಲ್ಲ. ಆ ಕ್ಷಣದಲ್ಲಿ ಪ್ರಾಣಾಪಾಯದಿಂದ ಮುಕ್ತನಾಗಲು ಮಕರಕೇತುವಿನ ಪರಿಚಯ ತನಗಿದೆಯೆಂದು ಹೇಳಿದನೇ ಹೊರತು, ನಿಜಕ್ಕೂ ಮಕರಕೇತುವನ್ನು ಅವನು ನೋಡಿದ್ದೇ ಇಲ್ಲ. ಆದರೆ ಅವನು ಅರಣ್ಯ ದಲ್ಲಿ ತಿರುಗುತ್ತಿರುವಾಗ ಅರಣ್ಯವಾಸಿಗಳ ಬಾಯಿ ಯಿಂದ ಹೊರಟ ಮಾತುಗಳಿಂದ, ಮಕರಕೇತುವಿನ ವಿಷಯ ಸ್ವಲ್ಪಮಟ್ಟಿಗೆ ತಿಳಿದಿತ್ತು. ಸರ್ಪನಖನೂ ಜಲವಾಸಿಯಂತೆ ಕಂಡುದರಿಂದ ಹಾಗೊಂದು ಮು ಬಾಣ ಹಾರಿಸಿದ್ದ, ಅಷ್ಟೇ.

ಈಗ ಎಂತಹ ಸುಳ್ಳನ್ನು ಹೇಳಿ ತನ್ನ ಪ್ರಾಣವನ್ನು ಉಳಿಸಿಕೊಳ್ಳುವುದೆಂದು ಅವನ ಮನಸ್ಸು ಬೆಂಕಿಯ ಮೇಲೆ ನಿಂತಂತೆ ಕುಣಿಯುತ್ತಿರಲು, ಕಳ್ಳರ ಗುಂಪಿ ನಿಂದ ಒಮ್ಮೆಗೇ ಕಿರಿಚಾಟ ಕೇಳಿಸಿತು. ಸರ್ಪನಖ ಲಕ್ಷ್ಯ ಅವರ ಕಡೆಗೆ ಹೋಯಿತು.

ಆಗ ಗಡೇಗುಡ್ಡ ಅವನ ಮುಂದೆ ತುರುತುರ ಓಡಿ ಬಂದು ಕೈಮುಗಿದು, "ಅಯ್ಯಾ, ಜಲಾಶ್ವ ವೀರರೇ, ನೀವು ಈ ದುಷ್ಟನೊಂದಿಗೆ ಮಾತಾ ಡುತ್ತಾ ನಿಮ್ಮ ಜತೆಗಾರನಿಗೆ ಏನಾಯಿತೆಂಬುದನ್ನು ಮರೆತೇ ಬಿಟ್ಟಹಾಗಿದೆ" ಎಂದನು.

ಆ ಮಾತು ಕೇಳಿದ ಕೂಡಲೇ ಸರ್ಪನಖನಿಗೆ ತನ್ನ ತಮ್ಮನ ಸಂಗತಿ ನೆನಪಾಗಿ ಗಾಬರಿಯಾಯಿತು. "ಏನಾಯಿತು ಅವನಿಗೆ?" ಎನ್ನುತ್ತ ತಲೆ ತಿರುಗಿ ನಾಲ್ಕೂ ಕಡೆಗೆ ನೋಡುತ್ತ "ಓ ತಮ್ಮಾ ಸರ್ಪ ಸ್ವರಾ! ಏನು ಮಾಡಿದೆಯೋ? ಆ ನರವಾನರ ಏನಾಯಿತು? ಎಲ್ಲಿ ಹೋದೆಯೋ ತಮ್ಮಾ!" ಎಂದು ಕೂಗಿ ಕೂಗಿ ಕೇಳಿದನು.

ತಮ್ಮನ ಕಡೆಯಿಂದ ಯಾವ ಪ್ರತ್ಯುತ್ತರವೂ ಬಾರ ದಿರಲು, "ಅವನಿಗೇನಾಯಿತು? ನೀವೇನು ನೋಡಿದಿರಿ?" ಎಂದು ಕಳ್ಳರನ್ನು ನೋಡಿ ಸರ್ಪನಖ. ಕಳ್ಳರು ಏನೂ ಹೇಳದೆ, ತಲೆಬಗ್ಗಿ ನೆಲವನ್ನು ನೋಡುತ್ತ ನಿಂತುಬಿಟ್ಟರು. ಅದನ್ನು ನೋಡಿ ಸರ್ಪನಖನಿಗೆ ಇನ್ನಷ್ಟು ಗಾಬರಿಯಾಯಿತು.

"ಎಲವೋ ಮಂದಮತಿ ಕಳ್ಳ ನರಹುಳಗಳೇ! ಹೀಗೆ ಮುಖಜೋಲು ಹಾಕಿ ನೋಡುವಿರೇನು! ಏನು ನಡೆಯಿತೋ ಬಾಯಿಬಿಡಿರಿ!" ಎಂದು ಗದರಿಸಿದನು.

ಆಗ ಗಡೇಗುಡ್ಡ ತಲೆಯೆತ್ತಿ, "ಜಲಾಶ್ವಶೂರಾ! ನಿಮ್ಮ ತಮ್ಮನೂ ನರವಾನರವೂ ಕೂಡಿ ಅದೋ

ಅಲ್ಲಿ ಕಾಣುವ ಮರಗಳ ಗುಂಪಿನೊಳಗೆ ಹೋದರು. ಅವರ ಜಲಾಶ್ವ ಮತ್ತೊಂದು ದಿಕ್ಕಿಗೆ ಹೋಯಿತು. ಆ ಕೆಟ್ಟ ವಾನರವು ಕೃಪಾಣಜಿತ್ತು ಎಂಬ ಈ ದುಷ್ಟನ ಸಾಕುಪ್ರಾಣಿ. ಅದು ಇವನ ಮನಸ್ಸನ್ನೇ ತಿಳಿದು ಅದಕ್ಕೆ ತಕ್ಕ ಹಾಗೆ ನಡೆಯುವಂಥಾದ್ದು. ಅದು ನಿಮ್ಮ ತಮ್ಮನನ್ನು ಎತ್ತಿ ಭುಜದ ಮೇಲೆ ಹೊತ್ತುಕೊಂಡು ಅಡವಿಯೊಳಗೆ ತಪ್ಪಿಸಿಕೊಂಡು ಹೋಗಬೇಕೆಂದು ಇವನು ನೆನೆಸಿಕೊಂಡಿದ್ದಾನೆ. ಸನ್ನೆಯಿಂದಲೂ ಆಜ್ಞಾಪಿಸಿದ್ದಾನೆ, ಕೂಡಲೇ ಅದು ಹಾಗೇ ಮಾಡಿ ಬಿಟ್ಟಿತು. ಅದರ ಶಕ್ತಿಗೆ ಈಡುಜೋಡಿಲ್ಲ. ನಾವೆಷ್ಟು ತಡೆದರೂ ಅದು ಓಡಿಯೇಬಿಟ್ಟಿತು. ಎಲ್ಲದಕ್ಕೂ ಈ ದುಷ್ಟನೇ ಕಾರಣ !" ಎಂದನು.

"ಕೆಟ್ಟ ಸಾವಿನ ಸಮಾಚಾರವನ್ನು ಎಷ್ಟು ತಣ್ಣಗೆ ಹೇಳುವಿಯೋ ಕುಳ್ಳಕುನ್ನೀ !" ಎಂದು ಸರ್ಪನಖನು ಸಂಕಟಪಡುತ್ತ ಕೂಗಿ, ಕೃಪಾಣಜಿತ್ತುವಿನ ಕೊರಳಿಗೆ ಬಿಗಿಸಿದ ತಾಮರೆದಂಟಿನ ಹಗ್ಗವನ್ನು ಗಡೇಗುಡ್ಡನ ಕೈಗೆಕೊಟ್ಟು, "ಈ ದುಷ್ಟ ಓಡಿ ಹೋಗದಂತೆ ನೋಡುವ ಬಾಧ್ಯತೆ ನಿನ್ನದು. ಸಹಾಯಕರನ್ನೂ ಕರೆದುಕೋ. ಆ ನರವಾನರವನ್ನು ಚಚ್ಚಿಹಾಕಿ, ನನ್ನ ತಮ್ಮನನ್ನು ಈಗಲೇ ಬಿಡಿಸಿಕೊಂಡು ಬರುತ್ತೇನೆ" ಎಂದು ಹೇಳಿ ತನ್ನ ಜಲಾಶ್ವವನ್ನು ಆ ಮರಗಳ ಗುಂಪಿನ ಕಡೆಗೆ ಓಡಿಸಿದನು.

ಈ ಗಡೇಗುಡ್ಡನ ಮನೆ ಹೊತ್ತಿಕೊಂಡು ಉರಿಯುವಾಗ ಎದ್ದ ಬೆಂಕಿಯನ್ನು, ಹೊಗೆಯನ್ನು, ಕೃಪಾಣಜಿತ್ತು ನರವಾನರಗಳೊಂದಿಗೆ ಗಡೇಗುಡ್ಡನ ಕಡೆಯವರು ಹೋರಾಡುವುದನ್ನು, ಆಗ ಉಂಟಾದ ಶಬ್ದವನ್ನು, ಜಯಶೀಲ, ಸಿದ್ಧಸಾಧಕರು ಕಲ್ಲುಗಳ ರಾಶಿಯ ಮರೆಯಲ್ಲಿ ನಿಂತು ನೋಡುತ್ತಿದ್ದರು. ಅದಕ್ಕೆ ಕಾರಣವೇನೆಂಬುದು ಅವರಿಗೆ ಗೊತ್ತಾಗಲಿಲ್ಲ. ಅವರು ತಮ್ಮ ಬಳಿಯಲ್ಲಿದ್ದ ಕುಳ್ಳರ ಸೇನಾಪತಿಗೆ, ಅದನ್ನು ತೋರಿಸಿ, ಅಲ್ಲಿ ನಡೆಯುವ ಗಲಾಟೆಗಳಿಗೆ



ಕಾರಣ ತಿಳಿದು ಬರುವಂತೆ ಹೇಳಿ ಕಳುಹಿಸಿದರು. ಕುಳ್ಳರ ಸೇನಾಧಿಪತಿ ಇಬ್ಬರು ಅನುಚರರನ್ನು ಕರೆದುಕೊಂಡು, ಕಲ್ಲುಗಳ ರಾಶಿಯ ತುದಿಗೆ ಹತ್ತಿ ಗಡೇಗುಡ್ಡನ ಕೇರಿಯ ಕಡೆಗೆ ನೋಡಿದನು. ಆಗ ಕೆಲವು ಗುಡಿಸಲುಗಳು ಉರಿಯುತ್ತಿರಲು, ಕೃಪಾಣಜಿತ್ತು ನರವಾನರಗಳೊಂದಿಗೆ ಜಟಾಪಟಿ ನಡೆಸುವ ಕುಳ್ಳರನ್ನೂ ಅವರು ನೋಡಿದರು.

ಗಡೇ ರಾಣಿಯ ಆ ಸೇನಾಧಿಪತಿಗೆ ತಮ್ಮ ಶತ್ರುಗಳಿಗಾಗುವ ಹಿಂಸೆಯನ್ನು ನೋಡಿ ಬಹಳ ಸಂತೋಷವಾಯಿತು. ಈ ಶುಭವಾರ್ತೆಯನ್ನು ಜಯಶೀಲನಿಗೆ ಹೇಳಬೇಕೆಂಬ ಆತುರದಿಂದ ಹಿಂದಿರುಗಿದನು. ಆಗ ಹಠಾತ್ತಾಗಿ ಜಲಾಶ್ವಗಳ ಮೇಲೆ ಕಾಣಿಸಿದ ಇಬ್ಬರು ವಿಚಿತ್ರ ಮನುಷ್ಯರೂ ಅವರಿಗೆ ಕಾಣಿಸಿದರು. ಅವರೂ ಆ ಜಗಳದಲ್ಲಿ ಸೇರಿದುದನ್ನೂ ನೋಡಿದರು. ಅವರಿಗೆ ಇನ್ನಷ್ಟು ಕುತೂಹಲವಾಯಿತು. ಆದರಿಂದ "ಆ ವಿಚಿತ್ರ ಕುದುರೆಗಳೇನು? ಅದರ ಮೇಲಿ



ರುವ ವಿಚಿತ್ರ ಮನುಷ್ಯರೇನು ?" ಎಂದು ಕುಳ್ಳರ ಸೇನಾಧಿಪತಿ ಆಶ್ಚರ್ಯಪಡುತ್ತಿರಲು, ಜಲಾಶ್ವದ ಮೇಲಿದ್ದವನು ಹಗ್ಗ ಎಸೆದು ಕೃಪಾಣಜಿತ್ತುವಿನ ಕೊರಳಿಗೆ ಉರುಳು ಹಾಕಿದ್ದೂ ಆಯಿತು. ಎರಡನೇ ಜಲಾಶ್ವಿಕನು ಕತ್ತಿ ಕುಣಿಸಿಕೊಂಡು ನರವಾನರದ ಮೇಲೆ ಎರಗಿದುದನ್ನೂ ನೋಡಿದರು.

ಗಡೇರಾಣಿಯ ಸೇನಾಧಿಪತಿ ಆತ್ಮಾನಂದಕೊಂಡು ದೊಡ್ಡ ದನಿಯಿಂದ ನಕ್ಕು, ತನ್ನ ಅನುಚರರನ್ನು ಅಲ್ಲೇ ಇರುವಂತೆ ಹೇಳಿ, " ಭೇಷ್ ! ಭೇಷ್ ! ಗಡೇ ಗುಡ್ಡನ ಗುಂಪಿನವರನ್ನೆಲ್ಲಾ ಚೂರುಚೂರು ಮಾಡಿ ರಾಶಿ ಹಾಕಲು ನಮಗಿದು ಒಳ್ಳೆಯ ಅವಕಾಶ. ಇದನ್ನು ಸುಮ್ಮನೆ ಬಿಡಬಾರದು. ಈ ಸಂಗತಿ ಯನ್ನು ನಮ್ಮ ರಾಣಿಯೊಂದಿಗೂ, ನಮ್ಮ ಮಹಾ ಕಾಯರೊಂದಿಗೂ ಹೇಳಿ ನಮ್ಮ ಭಟರನ್ನು ಕರೆದು ಕೊಂಡು ಬರುತ್ತೇನೆ. ಏನಾಗುವುದೋ ನೋಡಿ ಬಿಡೋಣ. ನೀವು ಮಾತ್ರ ಇಲ್ಲೇ ಇದ್ದು ಅಲ್ಲೇನು ನಡೆಯುವುದೋ ನೋಡುತ್ತಾ ಇರಬೇಕು" ಎಂದು ಹೇಳಿ ಉತ್ಸಾಹದಿಂದ ಹಿಂದಿರುಗಿ ಓಡಿಬಂದನು.

ಗಡೇರಾಣಿಯ ಸೇನಾಧಿಪತಿ ಜಯಶೀಲ ಸಿದ್ಧ ಸಾಧಕರ ಬಳಿಗೆ ಬಂದು, ಗಡೇಗುಡ್ಡನ ಕೇರಿಯಲ್ಲಿ ತಾನು ಕಂಡ ಸಂಗತಿಯನ್ನೆಲ್ಲಾ ಉತ್ಸಾಹದಿಂದ ಹೇಳಿದನು. ಅದನ್ನು ಕೇಳಿ ಸಿದ್ಧ ಸಾಧಕನು ಸಂತೋಷದಿಂದ ಕುಣಿದು ಕುಪ್ಪಳಿಸಿ ಶೂಲವನ್ನೆತ್ತಿ "ಜೈ ಮಹಾಕಾಳಾ !" ಎಂದು ಕೂಗಿ ಜಯಶೀಲ ನೊಂದಿಗೆ, " ಭೇಷ್ ! ಭೇಷ್ ! ಇನ್ನು ನಮ್ಮ ಕೆಲಸ ಮುಗಿದಂತೇ ಸರಿ. ಆ ವಿಚಿತ್ರ ಕುದುರೆಯ ಮೇಲೆ ಬಂದವರಿಬ್ಬರೂ ಅದೇ ಬಗೆಯ ವಿಚಿತ್ರ ಆನೆ ಬಾ... ಗ್ರಹದ ಮೇಲೆ ಬಂದ ಮಕರಕೇತುವಿನ ಗುಂಪಿನವ ರೆನ್ನಲು ಸಂದೇಹವೇನಿಲ್ಲ. ಆ ಮಕರಕೇತು ನಮ್ಮಿಂದ ತಪ್ಪಿಸಿಕೊಂಡುಹೋದನಲ್ಲಾ ? ಈಗ ಇವರಿಬ್ಬರನ್ನು ಹಿಡಿದು ನಯದಿಂದಲೋ ಭಯದಿಂದಲೋ ಅವ... ಬಾಯಿಯಿಂದ ಆ ಮಾಯಾ ಸರೋವರೇಶ್ವರನಿರು ಸ್ಥಳವನ್ನು ಕಂಡು ಹಿಡಿಯಬಹುದು. ಆ ಮೇಲೆ ಕನಕಾಕ್ಷರಾಜರ ಮಕ್ಕಳು ಕಾಂಚನ ವರ್ಮ ಕಾಂಚನ ಮಾಲೆಯರನ್ನೂ ಕಂಡುಹಿಡಿದು ಕರೆದುಕೊಂಡು ಹೋಗುವುದು ತುಂಬ ಸುಲಭ. ನೋಡಿದೆಯಾ ಮಹಾಕಾಳನ ದಯವೆಂದರೆ ಹೀಗೆಯೇ ಜೈ ಮಹಾಕಾಳಾ !" ಎಂದನು.

ಸಿದ್ಧಸಾದಕನು ಹೇಳುವ ಮಾತುಗಳನ್ನು ಜಯ ಶೀಲನು ಸುಮ್ಮನೆ ಕೇಳಿದನು. ಅವನಲ್ಲಿ ಯಾ... ಭಾವಾವೇಶವೂ ಕಾಣಲಿಲ್ಲ. ಅದನ್ನು ನೋಡಿ ಸಿದ್ಧ ಸಾಧಕನು ಬೇಸರದಿಂದ ರೇಗಿ, " ಜಯಶೀಲಾ, ನಾ... ಹೇಳಿದ್ದನ್ನು ನೀನು ಕೇಳಲೇ ಇಲ್ಲವೆ ? ಏನ... ಗಾಢಾಲೋಚನೆ ? ನಿನ್ನ ಮನಸ್ಸು ಯಾವ ಲೋಕ ದಲ್ಲಿಯೋ ವಿಹರಿಸಿಕೊಂಡಿದೆಯಲ್ಲಾ ? " ಎಂದ...

ಜಯಶೀಲನು ಕಿರುನಗೆಯೊಂದನ್ನು ಸೂ... " ಸಿದ್ಧಸಾಧಕಾ ! ಇಷ್ಟು ಹೊತ್ತು ಪಾತ ಹೇ...

ಹಾಗೆ ನೀನು ಹೇಳಿದುದೆಲ್ಲಾ ಕಿವಿಯೊಳಗೆ ಇಳಿಯದೆ ಹೋಗುವುದುಂಟೆ? ಆದರೆ ನನಗೆ ಒಂದೇ ಆಶ್ಚರ್ಯ. ಏಕೆಂದರೆ, ಯಾರೋ ಇಬ್ಬರು ವಿಚಿತ್ರ ಮನುಷ್ಯರು ವಿಚಿತ್ರ ಕುದುರೆಗಳ ಮೇಲೆ ಬಂದರೆಂದು ಕೇಳಿದ ಕೂಡಲೇ ನೀನು ಕನಕಾಕ್ಷರಾಜರ ಕುಮಾರ ಕುಮಾರಿಯರು ಸಿಕ್ಕಿದಷ್ಟು ಉತ್ಸಾಹದಿಂದ ಮಾತಾಡುವಿಯಲ್ಲ! ನಿನ್ನ ಮನಸ್ಸು ಕೋತಿಯ ಹಾಗೆ ಎಲ್ಲೆಲ್ಲೋ ಹಾರುತ್ತಿದೆಯಲ್ಲಾ!" ಎಂದನು.

ಜಯಶೀಲನ ಮಾತು ಸಿದ್ಧಸಾಧಕನನ್ನು ತುಂಬ ನಿರುತ್ಸಾಹ ಪಡಿಸಿತು. ಅವನು ಶೂಲದಿಂದ ಗಟ್ಟಿಯಾಗಿ ನೆಲವನ್ನು ಕುಟ್ಟಿ, "ಜಯಶೀಲಾ! ಹೀಗೆಲ್ಲಾ ಅನುಮಾನದಿಂದ ಲಾಭ ಪಡೆಯದೆ ಸುಮ್ಮನಿದ್ದರೆ ಯಾವ ಕಾಲಕ್ಕೆ ರಾಜನ ಮಕ್ಕಳ ಸಮಾಚಾರ ಗೊತ್ತಾದೀತು? ಅಷ್ಟರೊಳಗೆ ನಾವು ಈ ಅರಣ್ಯದಲ್ಲಿ ತಿರುಗಿ ತಿರುಗಿ ಮುದುಕರಾಗಿ ಎಲ್ಲಿಯೋ ಬಿದ್ದು ಸತ್ತುಹೋಗುತ್ತೇವೆ." ಎಂದನು.

"ಮುದುಕರಾಗುವ ಅವಸ್ಥೆ ಕಾಡಿನಲ್ಲಲ್ಲದಿದ್ದರೆ ನಾಡಿನಲ್ಲಿ ರಾಜಭವನದೊಳಗಿದ್ದರೂ ಬರುತ್ತದೆ. ನಾನು ಆಲೋಚನೆ ಮಾಡುವುದೇನೆಂದರೆ, ಇಲ್ಲಿಗೆ ಬಂದಿರುವ ಈ ಇಬ್ಬರು ವಿಚಿತ್ರ ಮನುಷ್ಯರು ಈ ಪ್ರಾಂತಕ್ಕೆ ಏಕೆ ಬಂದಿರಬಹುದು? ಎರಡನೆಯದು, ಅವರನ್ನು ಜೀವದೊಂದಿಗೆ ಹಿಡಿಯುವ ಉಪಾಯ ವೇನು ಅಂತ." ಎಂದ ಜಯಶೀಲ.

ಜಯಶೀಲನ ಮಾತು ಕೇಳಿದ ಮೇಲೆ ಸಿದ್ಧಸಾಧಕನ ಎಲ್ಲಾ ಉತ್ಸಾಹವೂ ಇಳಿದುಹೋಯಿತು. ಅವನು ತನ್ನ ಶೂಲವನ್ನು ನೆಲದ ಮೇಲೆ ಹಾಕಿ, "ಜಯಶೀಲಾ! ನಿನ್ನ ಮಾತು ನಿಜವೇ! ನನಗೆ ಸ್ವಲ್ಪ ಆತುರಬುದ್ಧಿ ಹೆಚ್ಚು, ಒಪ್ಪಿಕೊಳ್ಳುತ್ತೇನೆ. ನಾನು ಹೇಳಿದಂತೆ ಮಾಡಲಿಕ್ಕಾದರೂ ಮೊದಲು ಅವರಿಬ್ಬರನ್ನು ಜೀವದೊಂದಿಗೆ ಹಿಡಿಯಲೇಬೇಕು. ಅದು ಹೇಗೆ ಹಿಡಿಯುವುದೆಂಬುದನ್ನು ನೀನೇ



ಆಲೋಚನೆ ಮಾಡಿ ಹೇಳಬೇಕು." ಎಂದನು. "ಹಾಗೆ ತಗ್ಗಿ ದಾರಿಗೆ ಬಾರಪ್ಪ ಕಾಳಭಕ್ತ. ಉತ್ಸಾಹದ ಆವೇಶದಿಂದ ಹಾರಿಬಿಟ್ಟರೆ ಕೆಲಸ ಮುಗಿದಂತಾಗದು. ಈಗ ನಿನ್ನ ಶೂಲವನ್ನೇಕೆ ಕೆಳಗೆ ಹಾಕಿದೆ? ಇನ್ನು ಮೇಲೆ ನೀನು ನಿನಗಿರುವ ಮಂತ್ರಶಕ್ತಿ ಮಾತ್ರ ನಂಬುವಿಯಾ? ಶೂಲದ ಆಗತ್ಯವೇ ಇಲ್ಲವೇ?" ಎಂದು ಕೇಳಿದ.

ಸಿದ್ಧಸಾಧಕನು ತಟಕ್ಕನೆ ಶೂಲವನ್ನು ಎತ್ತಿಕೊಂಡು, "ಭೋ! ಮಹಾಕಾಳಾ! ನನ್ನ ಅಪಚಾರ ಮನ್ನಿಸು" ಎಂದು ಗೊಣಗಿ, "ಜಯಶೀಲಾ, ನನ್ನ ಮಂತ್ರಶಕ್ತಿ ಸರಿಯಾಗಿ ಪರಿಪಕ್ವವಾದುದಲ್ಲ. ಆ ದಿನ ಸ್ಮಶಾನದಲ್ಲಿ ಮಹಾಕಾಳನ ಬಂಟನಾದ ಕಾಲಕಾಲನೇ ನನ್ನ ಪ್ರಾಣ ತೆಗೆಯಲು ನೋಡಿದನಲ್ಲ! ಅದೇ ನನ್ನ ಮಂತ್ರಶಕ್ತಿ ಪರಿಪಕ್ವವಾಗಿಲ್ಲವೆಂಬುದಕ್ಕೆ ಗುರುತು" ಎಂದನು. "ಹೌದು ಹೌದು. ಆದಕ್ಕೆ ಕಾರಣ ನಿನ್ನ ಆತುರ ಬುದ್ಧಿ ಎಂಬುದು ತಿಳಿಯಿತಷ್ಟೆ? ಆ ಕಾಲ

ಕಾಲನಿಗೆ ಬದಲಾಗಿ ಈಗ ನಮ್ಮಿಬ್ಬರ ಪ್ರಾಣಗಳನ್ನೂ ಆ ಮಾಯಾ ಸರೋವರೇಶ್ವರನೋ ಅವನ ಕಡೆಯವರೋ ಎಳೆದುಕೊಂಡು ಹೋಗುವ ಪರಿಸ್ಥಿತಿ ಬಂದಿದೆ." ಎಂದು ಜಯಶೀಲನು ಕುಳ್ಳರ ಸೇನಾಧಿಪತಿಯ ಕಡೆಗೆ ನೋಡಿ, "ಸೇನಾಧಿಪತೀ! ನೀನು ನಿನ್ನ ಕೆಲವುಂದಿ ವೀರಭಟರೊಂದಿಗೆ, ನಮ್ಮ ಜತೆಯಲ್ಲಿ ಸಹಾಯಕ್ಕೆ ಬರಬೇಕು" ಎಂದನು.

"ಅಯ್ಯಾ, ಅಂತಹ ಆಜ್ಞೆಗಾಗಿಯೇ ನಾನು ಕಾದುಕೊಂಡಿದ್ದೇನೆ! ಇದೋ ತಯಾರು!" ಎಂದು ಕುಳ್ಳರ ಸೇನಾಧಿಪತಿ ತುಸು ದೂರದಲ್ಲಿ ನಿಂತಿರುವ ತನ್ನ ಭಟರಿಗೆ ಸಂಜ್ಞೆ ತೋರಿಸಿದನು.

ಹೀಗೆ ಕುಳ್ಳರ ಸೇನೆಯನ್ನು ಸಾಗಿಸಿಕೊಂಡು ಅವರೆಲ್ಲ ಗಡೇಗುಡ್ಡನ ಕೇರಿಯಕಡೆಗೆ ಹೊರಟರು. ಅವರು ಸ್ವಲ್ಪ ದೂರ ಹೋಗಲು, ಬಲಭಾಗದ ಆರಣ್ಯದೊಳಗಿನಿಂದ ನರವಾನರದ ಭಯಂಕರ ಕೂಗು ಗರ್ಜನೆಗಳು ಕೇಳಿಬರತೊಡಗಿತು. ಜಯಶೀಲ ಮೊದಲಾದವರು ಗಕ್ಕನೆ ನಿಂತು, ಆ ಕಡೆಗೆ ಲಕ್ಷ್ಯಗೊಟ್ಟರು.

ನರವಾರವು ಒಂದು ಹೆಮ್ಮರದ ಕೆಳಗೆ ಕುಣಿದು ಕುಪ್ಪಳಿಸುತ್ತ ನಡೆಯುತ್ತಿತ್ತು. ಆದರ ಭುಜಗಳ ಮೇಲೆ ವಿಚಿತ್ರ ಮನುಷ್ಯನೊಬ್ಬ ಸಿಕ್ಕಿ ಅಚಲನಾಗಿ ಬಿದ್ದಿದ್ದಾನೆ. "ಜಯಶೀಲ! ನಾನು ಯಾರನ್ನು ಪ್ರಾಣದೊಂದಿಗೆ ಹಿಡಿದು ಮಾಯಾಸರೋವರದ ರಹಸ್ಯಗಳನ್ನು ತಿಳಿಯಬೇಕೆಂದುಕೊಂಡೆನೋ ಅವರಲ್ಲೊಬ್ಬನು ನರವಾನರದ ಕೈಯಲ್ಲಿ ಸತ್ತಹಾಗಿದೆ! ಇನ್ನು ಎರಡನೆಯವನ ಪತ್ತೆಯಾಗಬೇಕಾಗಿದೆ" ಎಂದ ಸಿದ್ಧಸಾಧಕ.

ಜಯಶೀಲನು ಒಂದೆರಡು ಕ್ಷಣ ನಿಶ್ಚೇಷ್ಟಿತನಾಗಿದ್ದು, "ಆ ಎರಡನೇ ವಿಚಿತ್ರಮನುಷ್ಯ ಕೃಪಾಣಜಿತ್ತುವಿನ ಕೈಯಲ್ಲಿ ಸಾಯಲಿಲ್ಲವಷ್ಟೆ?" ಎಂದನು.

"ಹಾಗೇನಾದರೂ ಆಗಿಬಿಟ್ಟರೆ ಮತ್ತೆ ಕೃಪಾಣಜಿತ್ತುವಿಗೆ ಯಾರೂ ಎದುರಿಲ್ಲ. ಒಬ್ಬ ವಿಚಿತ್ರ ಮನುಷ್ಯನನ್ನು ಆ ನರವಾನರವೇ ಎತ್ತಿಕೊಂಡು ಹೋಗುತ್ತಿದೆ. ಎರಡನೆಯವನನ್ನು..."

ಸಿದ್ಧಸಾಧಕನ ಮಾತು ಮುಗಿಯುವುದರೊಳಗೇ ಜಲಾಶ್ವದ ಮೇಲೆ ಕುಳಿತಿರುವ ಸರ್ಪನಖನು ಬೇಗಬೇಗನೇ ಆ ಮರದ ಅಡಿಗೆ ಬರುತ್ತ, "ಸರ್ಪಸ್ವರಾ! ಎಲ್ಲಿರುವಿಯೋ? ಬಾರೋ ಸರ್ಪಸ್ವರಾ!" ಎಂದು ಆಗಾಗ ಕೂಗುತ್ತಿದ್ದನು.

ಜಯಶೀಲನು ಕೈಯನ್ನು ಅಡ್ಡಹಿಡಿದು, "ಅವನ ಕಣ್ಣಿಗೆ ಬೀಳದಂತೆ ಎಲ್ಲರೂ ಅಡಗಿಕೊಳ್ಳಿ, ಹೇಗಾದರೂ ಸರಿಯೇ, ಅವನನ್ನು ಜೀವದೊಂದಿಗೇ ಹಿಡಿಯಬೇಕು." ಎಂದು ಎಚ್ಚರಿಸಿದನು.

(ಇನ್ನೂ ಇದೆ)






ರಾಮಬಾಣದಷ್ಟು ವೇಗವಾಗಿಯೇ ರಾಮನ ಬಂಟನಾದ ಹನುಮಂತನು ಚಂದ್ರಸೇನೆ ಬಂದಿಯಾಗಿರುವ ಮಹಾಭವನವನ್ನು ಸಮೀಪಿಸಿದನು. ಅದು ಸ್ಫಟಿಕಕಲ್ಲುಗಳಿಂದ ಅಲ್ಲಲ್ಲಿ ಮಣಿ ಮಾಣಿಕ್ಯಗಳನ್ನು ಜೋಡುಗಿಸಿದ ಅದ್ಭುತ ಶಿಲ್ಪಗಳಿಂದ ರಾರಾಜಿಸುವ ಮಹಾಭವನ. ಅಷ್ಟೊಂದು ಕತ್ತಲೆಯಲ್ಲಿ ಕೂಡಾ ಆ ಭವನದಿಂದ ಹೊರಚೆಲ್ಲುವ ಹಸಿರುಕಾಂತಿಯಿಂದ ಎಲ್ಲೆಲ್ಲಾ ವಿಚಿತ್ರ ಸೌಂದರ್ಯವು ತುಂಬಿತ್ತು. ಮಧ್ಯೆ ಮಧ್ಯೆ ಅಲ್ಲಲ್ಲಿ ಕೂಡಿಸಿದ ಕೆಂಪುಕಲ್ಲುಗಳು ಕೆಂಪಗಿನ ಕಿರಣಗಳನ್ನು ಹೊರಡಿಸಿ ಚಿತ್ರವಿಚಿತ್ರ ಮಿಶ್ರ ಬಣ್ಣಗಳನ್ನು ಕುಣಿಸುತಿದ್ದುವು.

ಭವನದ ದ್ವಾರದ ಬಳಿಯಲ್ಲಿ ರಾಕ್ಷಸರಾರೂ ಕಾವಲಿರಲಿಲ್ಲ. ಎಲ್ಲರೂ ಕಾಳಿಕಾಲಯದ ಹತ್ತಿರ ನಡೆಯುವ ಮಹೋತ್ಸವದಲ್ಲಿ ಪಾಲುಗೊಳ್ಳಲು ಹೋಗಿದ್ದರು. ಹನುಮಂತನು ನಿರಾತಂಕವಾಗಿ ಭವನದ ಮಹಾದ್ವಾರದ ಬಳಿಗೆ ಹೋದನು. ಆ ದ್ವಾರದ ಮುಂದೆ ಕೆಂಪಗೆ ಹೊಳೆಯುವ ಕಣ್ಣುಗಳನ್ನು ತಿರುಗಿಸುತ್ತ, ಕಾಲುಗಳಿರುವ ಒಂದು ಭಯಂಕರ ರಕ್ಕಸಸರ್ಪವು ಅಲೆದಾಡಿಕೊಂಡಿತ್ತು. ಅದರ ಕಣ್ಣು ತಪ್ಪಿಸಿ ಒಳಗೆ ಹೋಗುವಂತಿಲ್ಲ.

ಹನುಮಂತನು ಆ ಮಹಾ ಸರ್ಪವನ್ನು ನೋಡುವುದಕ್ಕೂ ಅದರ ಕಣ್ಣು ಅವನ ಮೇಲೆ ಬೀಳುವುದಕ್ಕೂ ಸರಿಹೋಯಿತು. ಕೂಡಲೇ ಸರ್ಪವು ಭುಸುಗುಡುತ್ತಾ ಅಷ್ಟೆತ್ತರಕ್ಕೆ ಎದ್ದುನಿಂತಿತು. ಅದರ ಮೂಗಿನ ಹೊರಳೆಗಳಿಂದ ಹೊಗೆಯೂ ಜ್ವಾಲೆಗಳೂ ಹೊರಡತೊಡಗಿದುವು. ಹನುಮಂತನು ಆ ರಕ್ಕಸ ಸರ್ಪವನ್ನು ಕೊಂದುಬಿಡುವ ಉದ್ದೇಶದಿಂದ ಲಂಘಿಸಲಿಕ್ಕಿರಲು, ಅದು ಅವನನ್ನು ನುಂಗಿಬಿಡಲು ಬಾಯಿ ತೆರೆದು ಮುಂದಕ್ಕೆ ಬರತೊಡಗಿತು. ಅದೇ ಹೊತ್ತಿಗೆ ಭವನದ ಮೇಲು ಭಾಗದಿಂದ ಕೋಮಲವಾದ ಸ್ತ್ರೀಕಂಠದಿಂದ ಹೊರಟ ಒಂದು ಆರ್ತನಾದವು ಕೇಳಿಬಂದಿತು.

"ಇನ್ನು ಗುದ್ದಾಟದಿಂದ ಹೊತ್ತು ಕಳೆಯಬಾರದೆಂದುಕೊಂಡು ಹನುಮಂತನು ಮರುಕ್ಷಣವೇ

೩೨ ಮೈರಾವಣ ಸಂಹಾರ



32-1



ಸೂಕ್ಷ್ಮ ರೂಪಧರಿಸಿ ಅದರ ಬಾಯಿಯೊಳಗೆ ಪ್ರವೇಶಿಸಿ ಗಂಟಲಲ್ಲಿಳಿದು ಅದರ ಹೊಟ್ಟೆಯನ್ನು ಸೀಳಿ ಕೊಂದು ಹಾಕಿ, ಭವನದೊಳಗೆ ಹೊಕ್ಕು ಮುಂದೆ ಓಡಿದನು. ಭವನದೊಳಗೆಲ್ಲಾ ಕತ್ತಲೆ, ಅಲ್ಲಲ್ಲಿ ಗೋಡೆಯ ಕೆಂಪು ವಜ್ರಗಳಿಂದ ಹೊರಡುವ ಕೆಂಪಗಿನ ಕಾಂತಿಗಳು ತೇಲಿಕೊಂಡಿದ್ದುವು. ಹನುಮಂತನು ಸ್ತ್ರೀ ಕಂಠದ ಆರ್ತನಾದ ಹೊರಡುವ ದಿಕ್ಕು ಯಾವುದೆಂದು ನೋಡುತ್ತಿರಲು, ಮೇಲಿನ ಅಂತಸ್ತಿನಿಂದ ಕೊರಡೆಯ ಛಡಿಗಳಿಂದ ಹೊರಡುವ ಛಳ್‌ಛಳ್ ಶಬ್ದವೂ, ಮತ್ತೊಮ್ಮೆ ಸ್ತ್ರೀಯ ಆರ್ತನಾದವೂ ಕೇಳಿಸಿತು.

ಹನುಮಂತನು ಸರಸರನೆ ಅಲ್ಲಿಗೆ ಹೋದನು. ಚಂದ್ರಸೇನೆಯನ್ನು ಬಂಧಿಸಿದ ಕೋಣೆಯನ್ನು ನೋಡಿದನು. ಕೋಣೆಯ ಬಾಗಿಲು ಒಳಗಿನಿಂದ ಭದ್ರಪಡಿಸಲಾಗಿತ್ತು. ಹನುಮಂತನು ಎತ್ತರವಾಗಿದ್ದ ಕಿಟಕಿಯ ಮೂಲಕ ಒಳಕ್ಕೆ ದೃಷ್ಟಿ ಹಾಯಿಸಿದನು. ಆಗಲೇ ಮೂರ್ಛೆಯಿಂದ ಏಳುತ್ತಿದ್ದ ಚಂದ್ರಸೇನೆಯನ್ನು ಕ್ರೂರಳಾದ ಕಂಟಕಿ ರಾಕ್ಷಸಿ ಕೊರಡೆಯಿಂದ ಹೊಡೆಯುತ್ತಾ, "ಕೇಡೆ ಹಿಡಿದವಳೇ! ಪಾತಾಳ ಲಂಕೆಯ ಮಾರಿಯೇ! ಮೈರಾವಣನು ಬುದ್ಧಿಗೆಟ್ಟು ನಿನ್ನನ್ನು ಈ ಪಾತಾಳ ಲಂಕೆಗೆ ತಂದಿಟ್ಟಿದ್ದಾನೆ. ಬಾಯಿಬಿಡೇ! ಪಾತಾಳ ಲಂಕೆಗೆ ಯಾವನನ್ನು ತಂದಿಟ್ಟಿದ್ದೀಯೇ? ಹೇಳೇ! ಈಗಲೇ ಕೊಡಲಿಯಿಂದ ನಿನ್ನ ತಲೆ ಕಡಿದು ಹಾಕುತ್ತೇನೆ. ಅಷ್ಟೇಕೆ? ನಿನ್ನ ಕುತ್ತಿಗೆಗೆ ನನ್ನ ಕೈಯೇ ಸಾಕು. ಕುತ್ತಿಗೆ ಹಿಚುಕಿ ಕೊಲ್ಲುವುದೇ ನಿನಗೆ ತಕ್ಕ ಶಿಕ್ಷೆ!" ಎನ್ನುತ್ತಾ, ಚಂದ್ರಸೇನೆಯ ಕುತ್ತಿಗೆಗೆ ಕೈಹಾಕಿದಳು.

ಹನುಮಂತನು ಕೂಡಲೇ ತನ್ನ ಬಾಲವನ್ನು ಬೆಳೆಯಿಸಿ ಕಿಟಕಿಯ ಮೂಲಕವಾಗಿ ಒಳಕ್ಕೆ ಕಳುಹಿಸಿದನು. ಕಂಟಕಿ ಚಂದ್ರಸೇನೆಯ ಕುತ್ತಿಗೆ ಹಿಚುಕುವುದರೊಳಗೆ ಹನುಮಂತನ ಬಾಲ ಆ ರಾಕ್ಷಸಿಯ ಕುತ್ತಿಗೆಯನ್ನು ಸುತ್ತಿ ಗಟ್ಟಿಯಾಗಿ ಒತ್ತಿ ಹಿಂದಕ್ಕೆಳೆಯಿತು. ಕಂಟಕಿ ಕಿಂ ಕಂ ಎನ್ನಲಾಗದೆ, ನಾಲಗೆಯನ್ನೂ ಕಣ್ಣು ಗುಡ್ಡೆಗಳನ್ನೂ ಹೊರಗೆ ಚಾಚಿ ಬಿದ್ದು ಹಾಗೆಯೇ ಪ್ರಾಣಬಿಟ್ಟಳು.

ಆಮೇಲೆ ಹನುಮಂತನು ಆ ಕೋಣೆಯ ಬಾಗಿಲನ್ನು ಒದ್ದು ಮುರಿದು ಒಳಗೆ ಪ್ರವೇಶಿಸಿದನು. ಆತ್ಯಾಶ್ಚರ್ಯದಿಂದ ನೋಡುತ್ತಿರುವ ಚಂದ್ರಸೇನೆಯ ಮುಂದೆ ಮೊಣಕಾಲೂರಿ ವಂದಿಸಿದನು ಹನುಮಂತ. ಅನಂತರ ಕೆಲವು ಮಾತುಗಳಿಂದ ನಡೆದ ಸಂಗತಿಯನ್ನು ಅವಳಿಗೆ ತಿಳಿಸಿ, "ಹೀಗಾಗಿದೆ. ಈಗ ಮೈರಾವಣನನ್ನು ಕೊಲ್ಲುವ ಉಪಾಯವನ್ನು ನೀನೇ ಹೇಳಬೇಕು." ಎಂದನು.

ರಾಮನ ಹೆಸರು ಕೇಳಿದ ಕೂಡಲೇ, ಕಂಟಕಿಯಿಂದುಂಟಾದ ಎಲ್ಲಾ ನೋವುಗಳೂ ಚಂದ್ರಸೇನೆಯನ್ನು ಬಿಟ್ಟು ಹೊರಟುಹೋದುವು. ಅವಳು ಆಯಾಸ ಪರಿಹಾರಮಾಡಿಕೊಂಡವಳಾಗಿ, "ಹನು

ಮಂತಾ ! ನಿನಗೆ ಮೈರಾವಣನ ಪ್ರಾಣದ ರಹಸ್ಯವನ್ನು ಹೇಳುತ್ತೇನೆ. ಆದರೆ ಮೊದಲು ನೀನು ನನಗೊಂದು ವಾಗ್ದಾನ ಮಾಡಬೇಕು. ಮೈರಾವಣನ ಸಂಹಾರವಾದ ಮೇಲೆ ನಿನ್ನ ಯಜಮಾನನನ್ನು ನನ್ನ ಹತ್ತಿರ ಕರೆದುಕೊಂಡು ಬರಬೇಕು " ಎಂದಳು.



ಹಾಗೆಯೇ ರಾಮನನ್ನು ಕರೆದುಕೊಂಡು ಬರುತ್ತೇನೆಂದು ಹನುಮಂತನು ಚಂದ್ರಸೇನೆಗೆ ವಾಗ್ದಾನ ಮಾಡಿದನು. ಆ ಮೇಲೆ ಚಂದ್ರಸೇನೆ ಹನುಮಂತನಿಗೆ ಮೈರಾವಣನ ಪಂಚಪ್ರಾಣಗಳು ಭದ್ರವಾಗಿರುವ ಸ್ಥಳವನ್ನು ಕುರಿತು ಹೇಳಿದಳು. ಅಷ್ಟು ತಿಳಿದ ಮೇಲೆ ಹನುಮಂತನು ಆ ಕೋಣೆಯಿಂದ ಹೊರಗೆ ಬಂದು, ಆಕಾಶಕ್ಕೆ ಉಡ್ಡಾಣ ಮಾಡಿದನು. ಈಗ ಅವನು ಆಕಾಶಮಾರ್ಗದಲ್ಲಿ ಹೋಗುವುತ್ತಿರುವುದು ಸಪ್ತಮ ಸಮುದ್ರ ಮಧ್ಯದಲ್ಲಿರುವ ದ್ವೀಪಕ್ಕೆ. ಅಲ್ಲಿ ಅವನು ಜ್ವಾಲಾಮುಖಿ ಎಂಬ ಪದ್ಮವನ್ನು ತಲಪಿದನು. ಧಗಧಗನೆ ಉರಿಯುವ ಜ್ವಾಲೆಗಳೇ ಆ ಪದ್ಮಕ್ಕೆ ದಳಗಳಾಗಿದ್ದುವು. ಹನುಮಂತನು ಅಗ್ನಿದೇವನನ್ನು ಸ್ಮರಿಸುತ್ತ ಆ ಜ್ವಾಲಾ ಪದ್ಮದ ಮಧ್ಯಕ್ಕೆ ಹಾರಿ, ಅದರ ದಂಟಿನ ಮೂಲಕವಾಗಿ ಜಾರುತ್ತಾ ಮಕರಬಿಲವನ್ನು ಸೇರಿದನು.

ದಪ್ಪಗಿನ ನೀಲಬಣ್ಣದ ಕತ್ತಲೆ ತುಂಬಿದ ಆ ಪ್ರದೇಶದಲ್ಲಿ ಹೊಳೆಯುವ ಭಾರೀ ಭಾರೀ ಸರ್ಪಗಳು ಭುಸುಗುಟ್ಟಿಕೊಂಡಿದ್ದುವು. ಅನೇಕ ಪಿಶಾಚಗಣಗಳೂ ಹುಂಕರಿಸಿಕೊಂಡು ಎದ್ದುಬಂದುವು. ಹನುಮಂತನು ನೆಲ ಒಡೆಯುವ ಹಾಗೆ ದೊಡ್ಡದೊಂದು ಸಿಂಹನಾದ ಮಾಡಿ ತನ್ನ ದಾರಿಗೆ ಅಡ್ಡವಾಗಿದ್ದ ಆ ದುಷ್ಟ ಶಕ್ತಿಗಳನ್ನೆಲ್ಲಾ ತನ್ನ ಮುಷ್ಟಿಘಾತಗಳಿಂದ ಕುಟ್ಟಿ ಹೊಡೆದು ಗುದ್ದಿಬೀಳಿಸಿ, ಒಂದು ಕರಾಳ ಗುಹೆಯೊಳಗೆ ನುಗ್ಗಿದನು. ಅವನ ಶಕ್ತಿಯನ್ನು ರುಚಿನೋಡಿದ ಭೂತಗಳೆಲ್ಲಾ ದೂರದೂರ ಕಾಲಿಗೆ ಬುದ್ಧಿ ಹೇಳಿದುವು. ಆದರೆ ಗುಹೆಯಷ್ಟು ಎತ್ತರಕ್ಕಿದ್ದ ಒಂದು ಕರಿಯ ಭಯಂಕರಾಕಾರವು, ಬೆಳ್ಳಗೆ ಹೊಳೆಯುವ ಕೋರೆಹಲ್ಲುಗಳನ್ನು ತೋರಿಸುತ್ತ, ಕೆಂಗಣ್ಣುಗಳನ್ನು ತಿರುಗಿಸುತ್ತ ದಾರಿಗೆ ಅಡ್ಡವಾಗಿ ಗುಡ್ಡದಂತೆ ನಿಂತಿತ್ತು. ಅದು ಹನುಮಂತನನ್ನು ನೋಡಿ ಹುಬ್ಬು ಕುಣಿಸುತ್ತ ವಿಕಟಾಟ್ಟಹಾಸ ಮಾಡುವುದನ್ನು ನೋಡಿ ಹನುಮಂತನು "ಯಾರು ನೀನು ? ಬದುಕಬೇಕಾಗಿದ್ದರೆ ದಾರಿ ಬಿಡು !" ಎಂದನು.

ಆ ಭಯಂಕರಾಕಾರವು ಸಿಡಿಲು ಅಪ್ಪಳಿಸುವ ಹಾಗೆ ಭಡಭಡನೆ ನಕ್ಕು "ನಾನು ಬೇತಾಳನು ! ಭೂತಪ್ರೇತ ಪಿಶಾಚಿಗಳಿಗೆ ನಾಯಕನು ! ನೀನಾರು ? ಇಲ್ಲಿಯವರೆಗೆ ಬರಬಲ್ಲವರು ಇಬ್ಬರೇ ಇದ್ದಾರೆ. ಒಬ್ಬನು ಮೈರಾವಣ. ನೀನು ಆ ಎರಡನೇ ಮಹಾ ಶಕ್ತಿವಂತನೇ ಆಗಿರಬೇಕು !" ಎಂದು ಪುನಃ ನಕ್ಕಿತು.

ಹನುಮಂತನೂ ನಕ್ಕು, "ಬೇತಾಳನೆಂದರೆ ನೀನೇನಾ ? ಸ್ಮಶಾನಗಳಲ್ಲಿ ಸ್ವೇಚ್ಛೆಯಾಗಿ ತಿರುಗಾಡಿಕೊಂಡಿರುವ ನಿನಗೆ ಈ ಕತ್ತಲೆಯ ಗುಹೆಯೊಳಗೆ



ಬಿದ್ದಿರಬೇಕಾದ ದುರವಸ್ಥೆ ಏಕೆ ಬಂತು ? ಛೀ, ನಿನ್ನ ಹತ್ತಿರ ಮಾತಾಡುವ ಅಗತ್ಯ ನನಗೇನಿದೆ ? ದಾರಿ ಬಿಡು. ಇಲ್ಲದಿದ್ದರೆ ನನ್ನ ಶಕ್ತಿ ಎಂತಹುದೆಂದು ತೋರಿಸಬೇಕಾದೀತು'' ಎಂದನು.

ಬೇತಾಳವು ಹೇಳನೆ ಮಾಡುವಂತೆ ನೆಗಾಡಿ, ''ಎಲ್ಲಿ ? ಆ ಶಕ್ತಿ ಎಂತಹುದೆಂದು ನೋಡಿಬಿಡುತ್ತೇನೆ.'' ಎಂದಿತು.

ಆ ಮರುಕ್ಷಣವೇ ಹನುಮಂತನು ತನ್ನ ಮುಷ್ಟಿಯಿಂದ ಬೇತಾಳವನ್ನು ತಿವಿದನು. ಆ ಪೆಟ್ಟಿಗೆ ಅಷ್ಟು ದೊಡ್ಡ ಬೇತಾಳವು ನೆಲಕ್ಕೆ ಬಿದ್ದು, ಹನುಮಂತನಿಗೆ ನಮಸ್ಕಾರ ಮಾಡುತ್ತ, ''ಸ್ವಾಮೀ ! ವೀರಹನುಮಾನ್ ! ಧನ್ಯನಾದೆ. ಸಣ್ಣದೊಂದು ಅಪಚಾರದಿಂದ ಈ ಗುಹೆಯಲ್ಲಿ ಬಿದ್ದಿರುವಂತೆ ಶಾಪ ಪಡೆದೆ. ನಿನ್ನ ಸ್ಪರ್ಶದಿಂದ ಶಾಪವಿಮುಕ್ತಿಯಾಗುವುದೆಂದು ಶಿವನು ಹೇಳಿದ್ದಾನೆ. ಹಾಗೇ ಆಯಿತು ! ಜೈ ವೀರ ಹನುಮಾನ್ !'' ಎಂದು ಹೇಳಿ ಮಾಯವಾಯಿತು.

ಅಲ್ಲಿಂದ ಹನುಮಂತನು ಗುಹೆಯ ಮಧ್ಯಕ್ಕೆ ಹೋದನು. ಅಲ್ಲಿ ಉನ್ನತವಾದೊಂದು ಶಿಲಾ ವೇದಿಕೆಯ ಮೇಲೆ ಗುಂಡಗಿನ ರತ್ನಪೇಟಿಕೆ ಕಂಡು ಬಂತು. ಅದರ ಮುಚ್ಚಳದ ಮೇಲೆ ಅಗ್ನಿ ಶಿಖೆ ಪ್ರಜ್ವಲಿಸಿಕೊಂಡಿತ್ತು.

ಹನುಮಂತನು ಅದರ ಸಮೀಪಕ್ಕೆ ಹೋಗುತ್ತಲೇ, ಸಣ್ಣದಾಗಿದ್ದ ಅಗ್ನಿ ಜ್ವಾಲೆಗಳು ಪ್ರಚಂಡವಾಗಿ ಏಳತೊಡಗಿದವು. ಆ ಜ್ವಾಲೆಯ ನಾಲಿಗೆಗಳು ನೀಳನೀಳವಾಗಿ ಹನುಮಂತನನ್ನು ಸುತ್ತಿ ಸುಡುವಂತೆ ಬರತೊಡಗಿದುವು: ಕೂಡಲೇ ಹನುಮಂತನು ಬಲವಾಗಿ ಗಾಳಿಯನ್ನು ಹೀರಿಕೊಂಡು ಆ ಬೆಂಕಿ ಉರಿಯ ಕಡೆಗೆ ಪ್ರಳಯ ಮಾರುತದಂತೆ ಊದಿದನು. ಆ ರಭಸದ ಗಾಳಿಗೆ ಬೆಂಕಿಯ ಉರಿಗಳು ತಗ್ಗುವುದಕ್ಕೆ ಬದಲಾಗಿ ಇನ್ನಷ್ಟು ತೀವ್ರಗೊಂಡು ಅವನನ್ನು ಮುತ್ತಿದುವು.

ಹನುಮಂತನು ಕೈಗಳನ್ನೆತ್ತಿ ನಮಸ್ಕಾರ ಮಾಡುತ್ತ, ''ಹೇ ! ಅಗ್ನಿದೇವಾ ! ನಾನು ನಿನ್ನ ಮಿತ್ರನಾದ ವಾಯುವಿನ ಮಗ. ನನ್ನನ್ನು ಅನುಗ್ರಹಿಸು. ರಾಮ ಕಾರ್ಯವನ್ನು ಸಾಧಿಸು !'' ಎಂದು ಅಗ್ನಿಯನ್ನು ಧ್ಯಾನಿಸಿದನು. ಕೂಡಲೇ ಅಗ್ನಿಯ ಜ್ವಾಲೆಗಳು ಗಪ್ಪನೆ ಆರಿಹೋದುವು.

ಆಗ ರತ್ನಪೇಟಿಕೆಯ ಮೇಲಿರುವ ಜ್ಯೋತಿಯಿಂದ ಈ ಕೆಳಗಿನ ಮಾತುಗಳು ಹೊರಟುವು: ''ಅಪ್ಪಾ ಮಾರುತೀ ! ನಿನಗೊಂದು ಮುಖ್ಯವಿಷಯ ಹೇಳಬೇಕೆಂತಲೇ ನಾನು ಹೀಗೆ ವಿಜೃಂಭಿಸಿದೆ. ನೀನು ಈ ಪೇಟಿಕೆಯೊಳಗಿರುವ ಐದು ತುಂಬಿಗಳನ್ನು ಒಂದೇ ಸಾರಿ ಸಂಹರಿಸಬೇಕಾದರೆ ಐದು ಮುಖಗಳನ್ನು ತಂದುಕೊಂಡು ಅವುಗಳನ್ನು ನಿನ್ನ ಐದು ಬಾಯಿಗಳೊಳಗೆ ಸೆಳೆದು ಅಗಿದು ಉಗುಳಬೇಕು. ನೆನಪಿರಲಿ ! ನೆನೆದ ತಕ್ಷಣವೇ ನಿನಗೆ ಐದು ಮುಖಗಳೂ ಬರುತ್ತವೆ !'' ಹನುಮಂತನು ಅಗ್ನಿಗೆ ನಮಸ್ಕಾರ ಮಾಡಿ ತುಂಬಿ



ಗಳಿರುವ ರತ್ನಪೇಟಿಕೆಯನ್ನು ತೆಗೆದುಕೊಂಡು ವಾಯು ವೇಗದಿಂದ ರಾಮಲಕ್ಷ್ಮಣರಿರುವ ಸ್ಥಳಕ್ಕೆ ಬಂದನು.

ಅವರಿಬ್ಬರೂ ಇನ್ನೂ ಅಗಣಿತ ಮೈರಾವಣರೊಂದಿಗೆ ಹೋರಾಡಿಕೊಂಡೇ ಇದ್ದರು. ಅವರಿಬ್ಬರ ಕೈಗಳಿಂದ ಎಡೆಬಿಡದೆ ಬಾಣಗಳ ಮಳೆಯೇ ಸುರಿಯುತ್ತಿದ್ದಿತು. ಹನುಮಂತನು ಗಟ್ಟಿಯಾಗಿ ಸಿಂಹನಾದ ಮಾಡುತ್ತ ಮೈರಾವಣನ ಇದಿರಿನಲ್ಲಿ ನಿಂತು, ರತ್ನಪೇಟಿಕೆಯನ್ನು ಎತ್ತಿ ಹಿಡಿದು, "ಎಲೋ! ಪಾತಾಳ ಲಂಕೇಶ್ವರಾ! ನಿನ್ನ ಪಂಚಪ್ರಾಣಗಳಿರುವ ಪೇಟಿಕೆ ಇದೋ ನನ್ನ ಕೈಯಲ್ಲಿ! ಈಗಲಾದರೂ ಬುದ್ಧಿ ತಂದುಕೊಂಡು, ರಾಮಲಕ್ಷ್ಮಣರ ಮುಂದೆ ಶರಣಾಗಿ ಜೀವದಾನ ಬೇಡು!" ಎಂದನು.

ತನ್ನ ಪಂಚಪ್ರಾಣಗಳಿರುವ ರತ್ನಪೇಟಿಕೆಯನ್ನು ಹನುಮಂತನ ಕೈಯಲ್ಲಿ ನೋಡಿ ಮೈರಾವಣನು ಕಳವಳಪಟ್ಟನು. ತನ್ನ ಶರೀರವು ಬಂಡೆಕಲ್ಲುಗಳ ಮಧ್ಯೆ ಚಿಬ್ಬಿಯಾಗುವಂತೆ ನೋಯುತ್ತಿರಲು, "ಏನು ಕೆಲಸ ಮಾಡಿಬಿಟ್ಟೆಯೋ ಪಾಮರಾ! ವಾನರಾ! ಪೇಟಿಕೆಯೊಳಗೆ ಪ್ರಾಣಗಳು ನನ್ನವಾದರೂ ಅವು ರಾಮಲಕ್ಷ್ಮಣರಿಗೂ, ನಿನಗೂ ಮೃತ್ಯುವೆಂದುಕೋ. ಆ ಪೇಟಿಕೆಯನ್ನು ತೆರೆದರೆ ಸಾಕು. ಆ ಪ್ರಾಣಗಳು ಎಗರಿಬಂದು ನಿನ್ನನ್ನು ಚುಚ್ಚಿ ನಿನ್ನ ಶರೀರವನ್ನು ಕಾಲಕೂಟ ವಿಷದಿಂದ ತುಂಬಿಸಿ ನಿನ್ನ ಸರ್ವಾಂಗವನ್ನೂ ದಗ್ಧಮಾಡುತ್ತವೆ. ನೀನು ಮೂವರ ಮೃತ್ಯುವನ್ನೂ ಇಲ್ಲಿಗೆ ಹೊತ್ತುಕೊಂಡು ಬಂದಿರುವಿ! ಬದುಕಬೇಕೆಂಬ ಆಶೆಯಿದ್ದರೆ ಆ ಪೆಟ್ಟಿಗೆಯನ್ನು ಕೆಳಗಿಡು" ಎಂದನು.

ಹನುಮಂತನು ಆ ಮಾತುಗಳನ್ನು ಹೇಳಿ ಅಟ್ಟಹಾಸದಿಂದ ನಕ್ಕು, "ಮೂರ್ಖ ಮೈರಾವಣಾ! ನಿದ್ದೆಯಲ್ಲಿರುವ ರಾಮಲಕ್ಷ್ಮಣರನ್ನು ಮಾಯೆಯಿಂದ ಇಲ್ಲಿಗೆ ತಂದುದಕ್ಕೆ ಮರಣವೇ ಪ್ರತಿಫಲವಾಯಿತು! ನಿನಗೆ ಸಾವು ಖಂಡಿತ. ಅದೂ ಈಗಲೇ. ಸಾಯುವ ಮೊದಲು ಇನ್ನೇನಾದರೂ ಮಾಯಮಂತ್ರಗಳಿದ್ದರೆ ಪ್ರದರ್ಶಿಸಿಬಿಡು" ಎಂದನು.

ಹನುಮಂತನ ನಿರ್ಭಯತೆಯನ್ನು ನೋಡಿ ಮೈರಾವಣನು ಹೆದರಿ ಕೈಕಾಲುಗೆಟ್ಟು "ಕಂಟಿಕೀ! ಕಂಟಿಕೀ! ನೀನೆಲ್ಲಿ? ಕೂಡಲೇ ಚಂದ್ರಸೇನೆಯನ್ನು ಕೊಲ್ಲು!" ಎಂದು ನೆಲಬಿರಿಯುವಷ್ಟು ಕರ್ಕಶವಾಗಿ ಕೂಗಿದನು.

ಆಗ ಹನುಮಂತನು ಮಂದಹಾಸ ಬೀರುತ್ತ, "ಎಲವೋ ಮಾಯಾವಿಯೇ! ಆ ಕಂಟಕಿ ನಿನಗಿಂತಲೂ ಮೊದಲೇ ಮೃತ್ಯುಲೋಕಕ್ಕೆ ಹೋಗಿಬಿಟ್ಟಳು. ಅವಳಿಗೆ ನಿನಗಿಂತಲೂ ಹೆಚ್ಚು ಮುನ್ನೋಟವಿದೆ. ಅಲ್ಲಿ ನಿನ್ನನ್ನೇ ಕಾದುಕೊಂಡಿದ್ದಾಳೆ. ನೀನು ಹೇಳುವ ಮೊದಲೇ ಅವಳು ಚಂದ್ರಸೇನೆಯನ್ನು ಕೊಲ್ಲಲು ನೋಡಿದಳು. ಆಗಲೇ ಆ ದುಷ್ಟಳ ಆಯುಷ್ಯ ಮುಗಿದುಹೋಯಿತು!" ಎಂದನು. ಈಗ ಮೈರಾವಣನಿಗೆ ನಡೆದುದೆಲ್ಲಾ ಅರ್ಥವಾಗಿ

ಹೋಯಿತು. ಅವನು ಹುಚ್ಚನಹಾಗೆ ಒಂದು ಕೂಗು ಹಾಕಿ ಕೈಗೆಸಿಕ್ಕಿದ ಪ್ರತಿ ಆಯುಧವನ್ನೂ ತೆಗೆದು ಕೊಂಡು ಬಾಣದ ಹಾಗೆ ಪ್ರಯೋಗಿಸುತ್ತ ರಾಮ ಲಕ್ಷ್ಮಣರ ಕಡೆಗೆ ಧಾವಿಸಿದನು. ನಡುನಡುವೆ ಅವನು ತನ್ನ ಶರೀರವನ್ನು ತಾನೇ ಗಾಯಪಡಿಸಿ ರಕ್ತ ಸುರಿಸುತ್ತ, ಮೈರಾವಣರನ್ನು ತಂಡೋಪತಂಡವಾಗಿ ಸೃಷ್ಟಿಸಿದನು. ಅಂತಹ ಮೈರಾವಣ ಸಮೂಹ ರಾಮಲಕ್ಷ್ಮಣರನ್ನು ಮುತ್ತಿತು. ಅದನ್ನು ನೋಡಿ ಹನುಮಂತನು ಶಿವನನ್ನು ಸ್ಮರಿಸಿ ಐದು ಮುಖ ಗಳನ್ನು ಪಡೆದು ಪಂಚಮುಖಾಂಜನೇಯನಾಗಿ ಅವತರಿಸಿದನು.



ಹನುಮಂತನು ಐದು ಮುಖಗಳಿಂದಲೂ ಒಂದೇ ಸಾರಿ ಪ್ರಳಯಹುಂಕಾರ ಮಾಡಿ ರತ್ನಪೇಟಿಕೆಯ ಮುಚ್ಚಳವನ್ನು ಕಿತ್ತುಬಿಟ್ಟನು. ಮರುಕ್ಷಣ ಗುಡುಗು ಸಿಡಿಲುಗಳು ಬಿದ್ದಹಾಗೆ ಝೇಂಕರಿಸುತ್ತ ಕೆಂಪಗೆ ಕಣ್ ಚುಚ್ಚುವ ಐದು ತುಂಬಿಗಳು ಮೇಲೆ ಹಾರಿ ಅವನನ್ನು ಚುಚ್ಚಲು ಬಂದುವು. ಹನುಮಂತನು ಒಂದೊಂದು ಮುಖದಿಂದಲೂ ಗಟ್ಟಿಯಾಗಿ ಗಾಳಿಯನ್ನು ಒಳಕ್ಕೆ ಶ್ವಾಸಿಸಲು ಐದು ತುಂಬಿಗಳೂ ಒಂದೇ ಹೊತ್ತಿಗೆ ಅವನ ಬಾಯಿಯೊಳಗೆ ಸೆಳೆಯಲ್ಪಟ್ಟುವು. ಹನು ಮಂತನು ಐದು ಮುಖಗಳಿಂದಲೂ ಅವುಗಳನ್ನು ಬಲವಾಗಿ ಜಗಿದು ಕೊಂಡು ನೆಲದ ಮೇಲೆ ಉಗುಳಿ ಬಿಟ್ಟನು. ಮರುಕ್ಷಣದಲ್ಲಿ ನೋಡಿದರೆ ಮಾಯಾ ಮೈರಾವಣರ ಸಮೂಹವೆಲ್ಲಾ ನೆಲದಲ್ಲಿ ಹೆಣ ವಾಗಿ ಬಿದ್ದುವು. ಅಸಲು ಮೈರಾವಣನೊಬ್ಬನೇ ಅಲ್ಲಿ ಉಳಿದಿದ್ದ.

ಹೀಗೆ ತನ್ನ ಬಳಗವೆಲ್ಲಾ ನಾಶವಾದರೂ ಮೈರಾವಣನು ಓಡಿಹೋಗಲು ಪ್ರಯತ್ನ ಮಾಡ ಲಿಲ್ಲ. ಅವನು ರಾಮಲಕ್ಷ್ಮಣರ ಮೇಲೆ ವಿವಿಧವಾದ ಆಯುಧಗಳನ್ನೂ, ಬಾಣಗಳನ್ನೂ ಪ್ರಯೋಗಿಸಿ ಕೊಂಡೇ ಇದ್ದನು. ಆಗ ರಾಮನು ಒಂದು ಮಹಾ ಅಸ್ತ್ರದಿಂದ ಮೈರಾವಣನ ತಲೆಕಡಿದು ನೆಲಕ್ಕೆ ಬೀಳಿಸಿ ಅವನನ್ನು ಕೊಂದುಹಾಕಿದನು.

ನಾಲ್ಕು ದಿಕ್ಕುಗಳಿಂದಲೂ "ಜಯಜಯರಾಮ" ಎಂಬ ಧ್ವನಿ ಹೊರಟಿತು. ಪಂಚಮುಖಾಂಜ ನೇಯನ ಮೇಲೆಯೂ, ರಾಮಲಕ್ಷ್ಮಣರ ಮೇಲೆಯೂ ಪುಷ್ಪವೃಷ್ಟಿಯಾಯಿತು. ಬ್ರಹ್ಮಾದಿ ದೇವತೆಗಳೂ ಶಿವನೂ ಅಲ್ಲಿಗೆ ಬಂದರು.

ಬ್ರಹ್ಮನು ರಾಮನೊಂದಿಗೆ, "ಈ ಮೈರಾವಣನು ಕಾಲನೇಮಿಯ ಅಂಶದಿಂದ ಹುಟ್ಟಿದವನು. ಹನು ಮಂತನ ಸಹಾಯದಿಂದ ನಿನ್ನ ಕೈಯಲ್ಲಿ ಅವನು ಸತ್ತ. ಹನುಮಂತನು ಶಿವನ ಅಂಶದಿಂದ ಹುಟ್ಟಿದವನಾದುದ ರಿಂದಲೇ ಮಹಾ ಮಾಯಾವಿಯಾದ ಮೈರಾವಣನ ಸಂಹಾರಕ್ಕೆ ಆಗತ್ಯವಾದ ಆ ರತ್ನ ಪೇಟಿಕೆಯನ್ನು ಸಪ್ತಮ ಸಮುದ್ರದ ಮಧ್ಯದಿಂದ ತೆಗೆದು ಕೊಂಡು ಬರಲು ಶಕ್ತನಾದನು" ಎಂದು ಹೇಳಿದನು. ಶಿವನು ಹನುಮಂತನಿಗೆ ಆಶೀರ್ವಾದ ಮಾಡುತ್ತ,

"ಹನುಮಂತ, ನಿನ್ನ ಶಕ್ತಿ ಯುಕ್ತಿ ಬಲ ಪರಾಕ್ರಮ ಗಳು ಅಪಾರವಾದವು. ಮೈರಾವಣ ಸಂಹಾರ ವೆಂದರೆ ಸಾಮಾನ್ಯ ವಿಷಯವಲ್ಲ. ಯಾರಿಂದಲೂ ಸಾಧ್ಯವಾಗದ ಕಾರ್ಯಗಳನ್ನು ಬಹಳ ಸಾಮರ್ಥ್ಯ ದಿಂದ ನೇರವೇರಿಸಿರುವಿ. ನಿನ್ನ ಈ ಪಂಚಮುಖಾಂ ಜನೇಯ ಸ್ವರೂಪವನ್ನು ಸ್ಮರಿಸಿದವರಿಗೆ ಭೂತ ಪಿಶಾಚಾದಿಗಳಿಂದ ಯಾವ ಹಾನಿಯೂ ಬರುವು ದಿಲ್ಲ" ಎಂದನು.

ಹನುಮಂತನು ತನ್ನ ಪಂಚಮುಖದ ರೂಪವನ್ನು ಉಪಸಂಹರಿಸಿಕೊಂಡು ಬ್ರಹ್ಮನಿಗೂ ಶಿವನಿಗೂ ಪ್ರಣಾಮ ಮಾಡಿದನು. ಬ್ರಹ್ಮನೂ ಶಿವನೂ ಇತರ ದೇವತೆಗಳೂ ರಾಮಲಕ್ಷ್ಮಣರಿಗೆ ಶುಭಾಶೀರ್ವಾದ ಗಳನ್ನು ಮಾಡಿ ಹೊರಟುಹೋದರು.

ಬ್ರಹ್ಮನು ಹೊರಟುಹೋಗುವ ಮೊದಲು, ರಾಮನನ್ನು ಕುರಿತು, ಪಾತಾಳ ಲಂಕಾರಾಜ್ಯಕ್ಕೆ ಮತ್ಸ್ಯವಲ್ಲಭನನ್ನು ಅಧಿಪತಿಯನ್ನಾಗಿ ಮಾಡ ಬೇಕೆಂದು ಆದೇಶವಿತ್ತಿದ್ದನು. ಅದರಂತೆ ರಾಮನು ಮತ್ಸ್ಯವಲ್ಲಭನನ್ನು ಕರೆಯಿಸಿ, ಆವನನ್ನು ಪಾತಾಳ ಲಂಕೆಗೆ ರಾಜನನ್ನಾಗಿ ಅಭಿಷೇಕಿಸಿದನು.

ಅಂತಹ ಕೆಲಸಗಳೆಲ್ಲಾ ಮುಗಿದ ಮೇಲೆ ಹನು ಮಂತನು ತುಂಬ ವಿನಯದಿಂದ ತಾನು ಚಂದ್ರಸೇನೆಗೆ ಮಾಡಿದ ವಾಗ್ದಾನವನ್ನು ಹೇಳಿ, "ರಾಮಾ, ಆ ಚಂದ್ರಸೇನೆಯ ಸಹಾಯವಿಲ್ಲದಿರುತ್ತಿದ್ದರೆ ನಾನು ಮೈರಾವಣನ ಪ್ರಾಣಗಳಿರುವ ಸ್ಥಳವನ್ನು ಕಂಡು ಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಮೈರಾವಣ ಸಂಹಾರವಾದ ಮೇಲೆ ನಿನ್ನನ್ನು ಅವಳ ಬಳಿಗೆ ಕರೆದು ಕೊಂಡು ಬರುವುದಾಗಿ ವಾಗ್ದಾನ ಮಾಡಿದ್ದೇನೆ ಈಗ ನನ್ನ ವಾಗ್ದಾನವನ್ನು ನೆರವೇರಿಸುವುದು ನಿನ್ನ ಭಾರವಾಗಿದೆ. ದಯಮಾಡಬೇಕು" ಎಂದು ಕೈ ಜೋಡಿಸಿದನು.

ರಾಮನು ಸ್ವಲ್ಪ ಹೊತ್ತು ಮೌನವಾಗಿ ಆಲೋಚನೆ ಮಾಡಿದನು. ಆವನ ಆಲೋಚನೆಯ ರಹಸ್ಯವು ಹನುಮಂತನಿಗೆ ಗೊತ್ತಾಯಿತು. ಅವಳು ರಾಮನನ್ನೇ ಪತಿಯಾಗಿ ವರಿಸಿಕೊಂಡವಳು. ಅದು ಈ ಜನ್ಮದಲ್ಲಿ ಸಾಧ್ಯವಿಲ್ಲದ ಮಾತು. ಇದನ್ನು ಗ್ರಹಿಸಿದ ಹನುಮಂತನು "ರಾಮಾ, ನಿನ್ನ ವ್ರತ ಭಂಗವಾಗದಂತೆ ನಾನು ನೋಡಿ ಕೊಳ್ಳುತ್ತೇನೆ" ಎಂದು ಮೆಲ್ಲನೆ ಹೇಳಿದನು. "ಹಾಗಾದರೆ ಹೋಗೋಣ ನಡೆ" ಎಂದನು ರಾಮ ಮುಗುಳು ನಗುಸೂಸುತ್ತ.

ಹನುಮಂತನು ಅತ್ಯಂತ ಸಂತೋಷದಿಂದ ಚಂದ್ರಸೇನೆಯಿರುವ ಮಂದಿರಕ್ಕೆ ನಡೆಯಲು, ರಾಮ ಲಕ್ಷ್ಮಣರು ಕಿರುನಗುವಿನೊಂದಿಗೆ ಅವನನ್ನು ಅನುಸರಿಸಿದರು.



32-8